**7) ISSUE OF PERMITS:**

i) Application for the grant of a permit under clause-6 shall be made in form 2 of Schedule-II and shall be accompanied by a fee of Rs.5/- and an amount of Rs.100/- as security Deposit.

ii) If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By Order and in the Name of the Governor of Karnataka,

**P. ANANDA KUMAR**

Desk Officer (Sugar),

Commerce and Industries Department.

**SCHEDULE-I**

Following 44 villages were allocated temporarily to Sri Basaveshwara Sugars Ltd., Karjoal Village, Bijapur Taluk and District for supply of Sugarcane. The details of villages are as follows:

- 5 villages were withdrawn from Nandi Sahakari Sakkare Karkhane Ltd., Bijapur Taluk & District.
- 18 villages of Basavanabagevadi Taluk & Bijapur District were withdrawn from Bilagi Sugars Ltd., Badagandi, Bilagi Taluk, Bagalkote District.
- 21 villages of Basavanabagewadi Taluk, Bijapur District unallotted villages to any other sugar factories.

| | | | |
|---|---|---|---|
| | **Bijapur Taluk, - (5 villages)- from Nandi SSK** | | |
| 1) | Dudihal | | |
| 2) | Honaganahalli | | |
| 3) | Karajol | | |
| 4) | Savanahalli | | |
| 5) | Tonsyal | | |
| | **Basavanabagevadi, Bijapur District-(18 villages)- from Bilgi Sugars** | | |
| 1) | Asangi B.K. | 7) Kolhar | 13) Mattihal |
| 2) | Asangi K.D. | 8) Kubakaddi | 14) Mulawad |
| 3) | Garasangi B.K. | 9) Kurabardinni | 15) Muttaladinni |
| 4) | Garasangi K.D. | 10) Malghan | 16) Nagardinni |
| 5) | Halladagennuru | 11) Managuli | 17) Ronihal |
| 6) | Kalaguraki | 12) Masuti | 18) Thalewad |
| | **Basavanabagevadi Taluk, Bijapur District-(unallotted Villages)** | | |
| 1) | Takkalaki | 8) Agasanabal | 15) Somanal |
| 2) | Nandihal | 9) Sankanal | 16) Nagaralahuli |

| | | | |
|---|---|---|---|
| 3) | Sindhanagere | 10) Karabhatanal | 17) Kadagola |
| 4) | Nagaraldhoni | 11) Uttanal | 18) Adavinandyala |
| 5) | Sathihal | 12) Budihal | 19) Chiraladinni |
| 6) | Markabbinahalli | 13) Sasanur | 20) Alamatti |
| 7) | Byalyal | 14) Chabanur | 21) Bisalakoppa |

**P. ANANDA KUMAR**

CI 146 SGF 2009

Desk Officer (Sugar),
Commerce and Industries Department.

**SCHEDULE-II-FORM-I**

**(SEE CLAUSE 6)**

The Karnataka Sugarcane (regulation of Distribution), Sri Basaveshwara Sugars Ltd., at Karjoal Village, Bijapur Taluk and District Order 2010.

**Permit No.** **Date:**

1. Full name of the permit holder :
2. Father's Name :
3. Residential Address in full :
4. Quantity of Sugarcane for which permit is granted for export :
5. Area and village from which Sugarcane is permitted to be exported. :
6. A. Place to which it is to be exported :
   B. The purpose for which export is permitted.
   i. For Sale
   ii. For crushing sugar cane juice for Manufacture of Gur/Sakkare Gul/ Jaggery Rabi or Khandasari.
7. Their permit is valid up to :
8. The permit is granted subject to the following terms and conditions. :
   a) Permit is not transferable. :
   b) The permit shall be produced on demand by an officer authorized by the Deputy Commissioner.
   c) On expiry of the validity of the permission within 48 hours of the expiry of the validity date the permit shall be surrendered to the permit issuing authority.

Place:
Date:

SIGNATURE OF THE PERMIT ISSUING AUTHORITY.

**SCHEDULE-II-FORM-II**

**(SEE CLAUSE 7)**

The Karnataka Sugarcane (Regulation of Distribution), Sri Basaveshwara Sugars Ltd., at Karjoal Village, Bijapur Taluk and District Order 2010. Application for the grant of permit for exporting sugarcane from a reserved area.

1. Full Name of the Applicant :
2. Father's Name :
3. Residential Address in full :
4. Quantity of Sugarcane for which permit is requested for export :
5. Area and the Village from which Sugarcane is intended to be exported :
6. The purpose for which the export is intended :

i) For Sale

ii) For Crushing Sugarcane Juice or manufacture of Gur/Sakkare Gul/ Jaggery/ Rabi/ or Khandasari for sale or self consumption

I declare that, I am fully aware of the provisions of the Karnataka Sugarcane (Regulation of Distribution), Sri Basaveshwara Sugars Ltd., at Karjoal Village, Bijapur Taluk and District, Order 2010 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.I of the Schedule appended to the Karnataka Sugarcane (Regulation of Distribution), Sri Basaveshwara Sugars Ltd., at Karjoal Village, Bijapur Taluk and District, Order 2010 and I agree to abide by them.

Place: SIGNATURE OF THE APPLICANT.

Date:

PR-592

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಕಾಅಗ/ಕಾನಪ/ಎಫ್–24/2010/43, ದಿನಾಂಕ:12ನೇ ಏಪ್ರಿಲ್, 2010**

**ಅರ್ಜಿದಾರರು**

1) ಶ್ರೀಮತಿ ಶಮಶಾದ ಬಾಶಾಸಾಬ ಜಮಾಲಸಾಬನ್ನವರ
2) ಕು: ಶಬಾನಾ ಬಾಶಾಸಾಬ ಜಮಾಲಸಾಬನ್ನವರ
3) ಕು: ಸೈಯದಸಾಬ ಬಾಶಾಸಾಬ ಜಮಾಲಸಾಬನ್ನವರ
4) ಕು: ಶರೀನಬೇಗಂ ಬಾಶಾಸಾಬ ಜಮಾಲಸಾಬನ್ನವರ
5) ಕು: ಇಸ್ಮಾಯಿಲ್‌ಸಾಬ ಬಾಶಾಸಾಬ ಜಮಾಲಸಾಬನ್ನವರ
6) ಕು: ಆಸೀಫ್ ಬಾಶಾಸಾಬ ಜಮಾಲಸಾಬನ್ನವರ

ಸಾ: ನರಸಾಪುರ ಆಶ್ರಮಕಾಲನಿ, ಹೌಸ್‌ನಂ.466 ಬೆಟಗೇರಿ, ಗದಗ.

**ಪ್ರತಿವಾದಿಗಳು**

1) ಜಗದೀಶ ಬಸನಗೌಡಾ ಬರಮಗೌಡರ ನಂ.226 ಎಂ.ಇ.ಜಿ. ಸಿದ್ದಲಿಂಗನಗರ, ಗದಗ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಕೇಶ್ವಾಪುರ, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಶಮಶಾದ ಬಾಶಾಸಾಬ ಜಮಾಲಸಾಬನ್ನವರ ಹಾಗೂ ಇತರೆ ಐದು ಜನ (ಮೇಲೆ ನಮೂದಿಸಿದಂತೆ) ಸಾ: ನರಸಾಪುರ ಇವರು, ತಾವು ಮೃತ ಬಾಶಾಸಾಬ ಜಮಾಲಸಾಬನ್ನವರ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಾಶಾಸಾಬ ಜಮಾಲಸಾಬನ್ನವರ ಇವರು ಒಂದನೇ ಪ್ರತಿವಾದಿಗಳಾದ ಜಗದೀಶ ಬಸನಗೌಡ ಬರಮಗೌಡರ ಸಿದ್ದಲಿಂಗ್ ನಗರ, ಗದಗ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಹಾಗೂ ಕಾರ್ಮಿಕ ನಷ್ಟ
ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್.641

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು,**
**ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಕಾಅಗ/ಕಾನಪ/ಎಫ್–23/2010/38, ದಿನಾಂಕ:12ನೇ ಏಪ್ರಿಲ್, 2010**

**ಅರ್ಜಿದಾರರು**

ಶ್ರೀಮತಿ ದುರ್ಗಮ್ಮ ಹುಲಗೇಪ್ಪ ವಡ್ಡರ,
R/o ಹಳ್ಳಿಕೇರಿ ತಾ: ರೋಣ, ಜಿ: ಗದಗ.

**ಪ್ರತಿವಾದಿಗಳು**

1) ಕಮಾಲಚಂದ ಮಾಣಿಕಚಂದ ಜುಗಾಲ
R/o ಬ್ಯಾಳಿ ಓಣಿ, ಕೊಪ್ಪಳ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
ಏಳಮೇಲಿ ಕಾಂಪ್ಲೆಕ್ಸ್, ಸ್ಟೇಶನ್ ರೋಡ್, ಹೊಸಪೇಟೆ, ಜಿ: ಬಳ್ಳಾರಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ದುರ್ಗಮ್ಮಾ ಹುಲಗೇಪ್ಪ ವಡ್ಡರ R/o ಹಳ್ಳಿಕೇರಿ ತಾ: ರೋಣ, ಜಿ:ಗದಗ, ಇವರು, ತಾವು ಮೃತ ಹನುಮಂತಪ್ಪ ಹುಲಗೇಪ್ಪ ವಡ್ಡರ ಇವರ ತಾಯಿ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ಹುಲಗೇಪ್ಪ ವಡ್ಡರ ಇವರು ಒಂದನೇ ಪ್ರತಿವಾದಿಗಳಾದ ಕಮಾಲಚಂದ ಮಾಣಿಕಚಂದ ಜುಗಾಲ R/o ಬ್ಯಾಳಿ ಓಣಿ, ಕೊಪ್ಪಳ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ
ಹಾಗೂ ಕಾರ್ಮಿಕ ನಷ್ಟ
ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್.648

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ,**
**ಉಪವಿಭಾಗ–1, ಚಿಕ್ಕಮಗಳೂರು ಜಿಲ್ಲೆ**
**ಸಂಖ್ಯೆ:ಕಾಪಕಾ:ಎಫ್:2009, ದಿನಾಂಕ:25ನೇ ಫೆಬ್ರವರಿ, 2010**

**ಅರ್ಜಿದಾರರು**

ಶ್ರೀಮತಿ ಪ್ರೇಮ ಕೋಂ ಲೇ: ಗೋಪಾಲ ಮಸರಹಳ್ಳಿ ಗ್ರಾಮ, ಬಾರಂದೂರು ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

**ಪ್ರತಿವಾದಿಗಳು**

ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ಪ್ರಸರಣಾ ಮಾರ್ಗಗಳು ಮತ್ತು ಉಪಕೇಂದ್ರಗಳ ವಿಭಾಗ, ಶಾಂತಾ ಮ್ಯಾನ್ಸನ್, 2ನೇ ಮಹಡಿ, ಗಾಂಧಿನಗರ ಮುಖ್ಯರಸ್ತೆ, ಶಿವಮೊಗ್ಗ–577201.

**ಪ್ರಕಟಣೆ**

ಮೃತ ಶ್ರೀ ಗೋಪಾಲ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:30.05.2009 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿದ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಕೆ.ಜಿ. ಜಾನ್ಸನ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪವಿಭಾಗ–1,
ಚಿಕ್ಕಮಗಳೂರು.

ಪಿ.ಆರ್.512

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ,**
**ಸಂಖ್ಯೆ:ಡಬ್ಲ್ಯೂಸಿಎ/ಸಿಆರ್.9/2010 ಎಫ್, ದಿನಾಂಕ:22ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀಮತಿ ಜುಬೇದ W/o ಲೇಟ್ ಅಬ್ದುಲ್ ಹಮೀದ್ 27 ವರ್ಷ.
2) ದುಲೈಕ D/o ಲೇಟ್ ಅಬ್ದುಲ್ ಹಮೀದ್, 10 ವರ್ಷ.
3) ಪಾತೀಮತುಲ್ಲ ಜಲೀಲ, 8 ವರ್ಷ, D/o ಲೇಟ್ ಅಬ್ದುಲ್ ಹಮೀದ್, Minor
4) ಮೆಹಮ್ಮದ್ ಜುಮಾಲುದ್ದೀನ್ (6) Minor
5) ದಾವುದುಲ್ಲ ಹಕೀಮ್ 5 ವರ್ಷ Minor
6) ಹಸನಬ್ಬ S/o ಲೇಟ್ ಅಬೂಬಕ್ಕರ್ 55 ವರ್ಷ.
7) ಅವ್ವಮ್ಮ W/o ಹಸನಬ್ಬ 50 ವರ್ಷ.
ವಾಸ: ಬಾರಿಯಹೌಸ್, ಕುನೆಟ್ಟು ವಿಲೇಜ್, ಗುರುವನಕೆರೆ ಪೋಸ್ಟ್, ಬೆಳ್ತಂಗಡಿ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**

1) ವಿನೋದ ಎಂ.ಸಿ. S/o ಚಾಕೋ ಎಂ.ಸಿ. ಮಲೆಮುರಿಯಲ್ ಹೌಸ್, ಪೆರಿದಲಪೋಸ್ಟ್, ಪಿರಿಯತಡ್ಕ, ಬದಿಯಲ್ಕಡ, ಕಾಸರಗೋಡು, ಕೇರಳಾರಾಜ್ಯ.
2) ದಿ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ವೀಟು ಕುಟ್ಟಿಟಿಲ್ ಬಿಲ್ಡಿಂಗ್, ಎಂ.ಜಿ. ರೋಡ್, ಎರ್ನಾಕುಲಂ ಡಿಸ್ಟಿಕ್ಟ್, ಕೊಚ್ಚಿ, ಕೇರಳ ರಾಜ್ಯ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಜುಬೇದ ಇವರು ಗಂಡನಾದ ಶ್ರೀ ದಿವಂಗತ ಹಮೀದ್ ಇವರು 1ನೇ ಪ್ರತಿವಾದಿಗಳಾದ ಶ್ರೀ ವಿನೋದ ಎಂ.ಸಿ. ಲಾರಿ ನಂ.ಕೆಎಲ್-14-ಜಿ-3472ರಲ್ಲಿ ಚಾಲಕನಾಗಿ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:21.01.2010 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ, ಉಪವಿಭಾಗ-1, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ- I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ,**

**ಸಂಖ್ಯೆ:ಡಬ್ಲ್ಯೂಸಿಎ/ಸಿಆರ್.10/2010 ಎಫ್, ದಿನಾಂಕ:22ನೇ ಮಾರ್ಚ್, 2010**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ನೀಲು W/o ಅಮ್ಮುಮುಗೇರ<br>ವಾಸ: ಗಾಂಧಿನಗರ ಹೌಸ್, ಕಕ್ಕಿಂಜೆ ಪೋಸ್ಟ್,<br>ಚಾರ್ಮಾಡಿ ವಿಲೇಜ್, ಬೆಳ್ತಂಗಡಿ ತಾಲ್ಲೂಕು. | **ವಿರುದ್ಧ** | 1) ಶ್ರೀ ರಾಜೇಶ್ ಶೆಣೈ S/o ಅಮಿನಿ ಪುತು ಪಿಲ್ಯೆ,<br>ವಾಸ: ಡೋ.ನಂ.17-13-1072, ಪ್ಲಾಟ್ ನಂ. ಎಸ್-7,<br>2ನೇ ಮಹಡಿ, ಬಿ.ವಿ. ರೋಡ್, ಅತ್ತಾವರ.<br>2) ಐಎಫ್‌ಎಫ್‌ಸಿಡಿ ಟೋಕಿಯೋ ಜನರಲ್ ಇನ್ಸೂರೆನ್ಸ್ ಕಂ.ಲಿ., 3ನೇ ಮಹಡಿ, ಲಾಲ್‌ಬಾಗ್ ಟವರ್ಸ್, ಎಂ.ಜಿ. ರೋಡ್, ಮಂಗಳೂರು-3. |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ನೀಲು W/o ಅಮ್ಮು ಮುಗೇರ, ಇವರು ತಮ್ಮ ಮಗನಾದ ಶ್ರೀ ಬೇಬಿ ಮುಗೇರ ಇವರು 1ನೇ ಪ್ರತಿವಾದಿಗಳಾದ ಶ್ರೀ ರಾಜೇಶ್ ಶೆಣೈ ಇವರ ಲಾರಿ ನಂ.ಕೆಎ-19-ಬಿ-9697ರಲ್ಲಿ ಕ್ಲೀನರ್‌ನಾಗಿ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:27.12.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ, ಉಪವಿಭಾಗ-1, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ- I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ,**

**ಸಂಖ್ಯೆ:ಡಬ್ಲ್ಯೂಸಿಎ/ಸಿಆರ್.11/2010 ಎಫ್, ದಿನಾಂಕ:22ನೇ ಮಾರ್ಚ್, 2010**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀ ಹಮ್ಜ S/o ಲೇಟ್ ಅಬ್ದುಲ್ಲ ಮತ್ತು ಇತರರು, ಮೇಗಿನ ಹೌಸ್, ಚಾರ್ಮಾಡಿ ವಿಲೇಜ್ & ಪೋಸ್ಟ್, ಬೆಳ್ತಂಗಡಿ ತಾಲ್ಲೂಕು. | ವಿರುದ್ಧ | 1) ಶ್ರೀ ಮಹಾಬಲ ಎಂ. ವಾಸ: 2ನೇ ಮಹಡಿ, ಎಂಪೋರಿಯಂ ಕಮರ್ಷಿಯಲ್ ಬಿಲ್ಡಿಂಗ್ ಓಲ್ಡ್ ಪಂಪುವೆಲ್ ರೋಡ್, ಕಂಕನಾಡಿ, ಮಂಗಳೂರು.<br>2) ದಿ ನ್ಯೂ ಇಂಡಿಯಾ ಅಶುರೆನ್ಸ್ ಕಂ.ಲಿ., 2ನೇ ಮಹಡಿ, ರಾಮಭವನ ಕಾಂಪ್ಲೆಕ್ಸ್ ಕೊಡಿಯಲ್ ಬೈಲ್ ಪೋಸ್ಟ್, ಮಂಗಳೂರು ತಾಲ್ಲೂಕು. |

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಹಮ್ಜ S/o ಲೇಟ್ ಅಬ್ದುಲ್ಲ ಇವರು ತಮ್ಮ ಮಗನಾದ ಶ್ರೀ ಎಂ. ಅಶ್ರಾಫ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಮಹಾಬಲ ಎಂ. ಸಿವಿಲ್ ಕಂಟ್ರಾಕ್ಟರ್, ಬಿಲ್ಡಿಂಗ್ ಕನ್ಸಟ್ರಕ್ಷನ್ Mason ಕೆಲಸ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:26.10.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ, ಉಪವಿಭಾಗ-1, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-I, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ,**

**ಸಂಖ್ಯೆ:ಡಬ್ಲ್ಯೂಸಿಎ/ಸಿಆರ್.11/2010 ಎಫ್, ದಿನಾಂಕ:22ನೇ ಮಾರ್ಚ್, 2010**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀ ಹಮ್ಜ S/o ಲೇಟ್ ಅಬ್ದುಲ್ಲ<br>2) ಜುಲೇಕ W/o ಹಮ್ಮಜ ಮತ್ತು ಇತರರು, ಮೇಗಿನ ಹೌಸ್, ಚಾರ್ಮಾಡಿ ವಿಲೇಜ್ & ಪೋಸ್ಟ್, ಬೆಳ್ತಂಗಡಿ ತಾಲ್ಲೂಕು. | ವಿರುದ್ಧ | 1) ಶ್ರೀ ಮಹಾಬಲ ಎಂ. ವಾಸ: 2ನೇ ಮಹಡಿ, ಎಂಪೋರಿಯಂ ಕಮರ್ಷಿಯಲ್ ಬಿಲ್ಡಿಂಗ್ ಓಲ್ಡ್ ಪಂಪುವೆಲ್ ರೋಡ್, ಕಂಕನಾಡಿ, ಮಂಗಳೂರು.<br>2) ದಿ ನ್ಯೂ ಇಂಡಿಯಾ ಅಶುರೆನ್ಸ್ ಕಂ.ಲಿ., 2ನೇ ಮಹಡಿ, ರಾಮಭವನ ಕಾಂಪ್ಲೆಕ್ಸ್ ಕೊಡಿಯಲ್ ಬೈಲ್ ಪೋಸ್ಟ್, ಮಂಗಳೂರು ತಾಲ್ಲೂಕು. |

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಹಮ್ಜ S/o ಲೇಟ್ ಅಬ್ದುಲ್ಲ ಇವರು ತಮ್ಮ ಮಗನಾದ ಶ್ರೀ ಎಂ. ಅಶ್ರಾಫ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಮಹಾಬಲ ಎಂ. ಸಿವಿಲ್ ಕಂಟ್ರಾಕ್ಟರ್, ಬಿಲ್ಡಿಂಗ್ ಕನ್ಸಟ್ರಕ್ಷನ್ Mason ಕೆಲಸ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:26.10.2009 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ, ಉಪವಿಭಾಗ-1, ಮಂಗಳೂರು.

ಪಿ.ಆರ್.520

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್**

**ಉಪ ವಿಭಾಗ ಕಚೇರಿ, ಶಿರಸಿ**

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ**

**ಕಾರ್ಯಾಲಯದ ಪ್ರಕಟಣೆ**

**ಕ್ರ.ಸಂ.:ಪಂರಾಇಂ:ಉವಿ:ಶಿರಸಿ:**09–10, ದಿನಾಂಕ:

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯಿದೆ 22)ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ ಕಚೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ:ಗ್ರಾ.ಅ.ಪ/ 324/ ಕೆಎಸ್ಎಸ್/ 2005 ದಿನಾಂಕ:23–9–2005 ರ ಪ್ರಕಾರ ಹಾಗೂ ಸದರಿ ಅಧಿನಿಯಮದ 5(1) ಹಾಗೂ ಸೆಕ್ಷನ್–19(1) ಪ್ರಕಾರ ಈ ಕೆಳಗಿನವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರವೆಂದು ಗುರುತಿಸಿ ಆದೇಶಿಸಲಾಗಿದೆ.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್–5(1) | ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್–5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್– 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಪಂ.ರಾ.ಇಂ. ಉಪ ವಿಭಾಗ, ಶಿರಸಿ. | ಅಧ್ಯಕ್ಷರು, ತಾಲೂಕ ಪಂಚಾಯತ್, ಶಿರಸಿ. |

**ಕೈಪಿಡಿ–1**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1) ತಾಂತ್ರಿಕ ಶಾಖೆ
2) ಆಡಳಿತ ಶಾಖೆ
3) ಲೆಕ್ಕ ಶಾಖೆ
4) ಉಗ್ರಾಣ ಶಾಖೆ

**1) ತಾಂತ್ರಿಕ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರು ಈ ಉಪ ವಿಭಾಗ ಕಾರ್ಯಾಲಯದ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲಾ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು, ಇವರಿಗೆ ಸಹಾಯಕ್ಕಾಗಿ ಸಹಾಯಕ ಇಂಜಿನೀಯರರು–02 ಹುದ್ದೆ ಇರುತ್ತದೆ. ಕಿರಿಯ ಇಂಜಿನೀಯರರು–6, ಅದರಲ್ಲಿ 2 ಹುದ್ದೆ ಖಾಲಿ ಇರುತ್ತದೆ. ಕೆಲಸ ನಿರೀಕ್ಷಕರು–04 ,ಅದರಲ್ಲಿ ಮೂರು ಹುದ್ದೆ ಖಾಲಿಇರುತ್ತದೆ.

1) ಉದ್ದೇಶಿಸಿರುವ ರಸ್ತೆ, ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವದು.
2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವದು.
3) ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವದು.
4) ಎಂ.ಎಂ.ಆರ್. ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು ಮತ್ತು ಹಾಜರಾಗುವದು.
5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವದು ಹಾಗೂ ಅನುಮೋದನೆ ಪಡೆಯುವದು.
6) ತಾಲ್ಲೂಕು ಮಟ್ಟದ ಕೆ.ಡಿ.ಪಿ. ಸಭೆಗೆ ಪ್ರಗತಿ ವರದಿ ತಯಾರಿಸುವುದು ಹಾಗೂ ಹಾಜರಾಗುವದು.
7) ಯೋಜನೆಗಳ ನಿರ್ಮಾಣದ ಪಾವತಿಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವದು.

**ಕೈಪಿಡಿ–2**

**ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರಿ ಮತ್ತು ವಿಧಿಗಳ ವಿವರ.**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ ಇವರು ಉಪ ವಿಭಾಗದ ಮುಖ್ಯಸ್ಥರಿದ್ದು, ಇವರು ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ , ಶಿರಸಿ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಾರೆ.

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಾರ್ಯಭಾರ ಈ ಕೆಳಗಿನಂತಿರುತ್ತದೆ.**

1) ಪ್ರತಿಯೊಂದು ಉಪ ವಿಭಾಗದ ಮುಖ್ಯಸ್ಥರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರವರು ಇರುತ್ತಾರೆ. ಇವರು ಉಪ ವಿಭಾಗದ ಕಾಮಗಾರಿಗಳ ಶೇ.100ರಷ್ಟು ಪರಿಶೀಲನೆ ಮಾಡಬೇಕಾಗುತ್ತದೆ.
2) ಮೇಲಾಧಿಕಾರಿಗಳು ನೀಡಿರುವ ತಪಾಸಣೆಯ ಟಿಪ್ಪಣಿಗಳಿಗೆ ತ್ವರಿತವಾಗಿ ಅನುಸರಣಾ ವರದಿಯನ್ನು ನಿಯಮಾವಳಿಗಳಂತೆ ಸಲ್ಲಿಸುವದು.
3) ಉಪ ವಿಭಾಗದ ಸಿಬ್ಬಂದಿ, ಲೆಕ್ಕ ವಿಚಾರಗಳು ಮತ್ತು ತಾಂತ್ರಿಕ ವಿಚಾರಗಳು , ಉಗ್ರಾಣದ ಲೆಕ್ಕ ವಿಚಾರಗಳು ಈ ಎಲ್ಲವನ್ನು ನಿರ್ವಹಿಸುವಲ್ಲಿ ಅವರೇ ಜವಾಬ್ದಾರರಾಗಿರುತ್ತಾರೆ.
4) ಅವರ ಅಧೀನದಲ್ಲಿ ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಸಹಾಯಕ ಇಂಜಿನೀಯರು, ಕಿರಿಯ ಇಂಜಿನೀಯರು, ಬೆರಳಚ್ಚುಗಾರರು ಉಪ ವಿಭಾಗದ ಕೆಲಸಗಳನ್ನು ಜವಾಬ್ದಾರಿಯುತರಾಗಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರಿಗೆ ಕೆಲಸ ನಿರ್ವಹಿಸಲು ಸಹಾಯಕರಾಗಿರುತ್ತಾರೆ.
5) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಕಾರ್ಯನಿರ್ವಾಹಕ ಇಂಜಿನೀಯರ್‌ರವರಿಗೆ ಮಾಹಿತಿಯನ್ನು ನಿಗದಿತ ದಿನಾಂಕದೊಳಗೆ ಎಲ್ಲಾ ನಿಯತಕಾಲಿಕೆಗಳನ್ನು ನಿಯಮಾನುಸಾರ ಸಲ್ಲಿಸಲು ಕ್ರಮ ತೆಗೆದುಕೊಳ್ಳುವುದು.
6) ಕಾಮಗಾರಿಗಳ ಅಂದಾಜು ತಯಾರಿಕೆ, ಕರಡು ಟೆಂಡರ್ ಪತ್ರಗಳ ತಯಾರಿಕೆ, ಗುತ್ತಿಗೆದಾರರಿಗೆ ನಿವೇಶನ ಇತರೇ ಕಾಮಗಾರಿಗಳ ಮಾರ್ಕ ಔಟ್ ಮಾಡುವ ಬಗ್ಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರು ಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

ಸಹಾಯಕ ಇಂಜಿನೀಯರ್/ಕಿರಿಯ ಇಂಜಿನೀಯರ್‌ರವರುಗಳು ತಾಂತ್ರಿಕ ವಿಚಾರಗಳು, ಶಾಖಾ ಲೆಕ್ಕಗಳು, ಟಿ ಮತ್ತು ಪಿ ಲೆಕ್ಕಗಳು, ಎಂ.ಇ.ಎಸ್. ಲೆಕ್ಕಗಳು ಮತ್ತು ಇತರೇ ವಾಹನಗಳ ಲೆಕ್ಕಗಳನ್ನು ನಿರ್ವಹಿಸುವರು. ಇವರುಗಳು ಬಿಲ್ಲು ತಯಾರಿಕೆಗಳನ್ನು ನಿರ್ವಹಿಸುವುದು ಅಲ್ಲದೇ ಪುಸ್ತಕಗಳಲ್ಲಿ ಕಾಮಗಾರಿಗಳ ವಿವರಗಳನ್ನು ಮತ್ತು ಅಳತೆಗಳನ್ನು ನಮೂದಿಸಿ ಗುತ್ತಿಗೆದಾರರಿಗೆ ಬಿಲ್ಲು ಪಾವತಿಸುವಲ್ಲಿ ಸರ್ಕಾರವು ನಿಗದಿಪಡಿಸಿದ ಸಮಯದೊಳಗೆ ಪಾವತಿಯಾಗುವಂತೆ ಕ್ರಮ ತೆಗೆದುಕೊಳ್ಳುವುದು.

**ಕೈಪಿಡಿ–3**

ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಹಾಗೂ ಜವಾಬ್ದಾರಿ ವಿವರಗಳು ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ಕಾರ್ಯನಿರ್ವಹಿಸುವಲ್ಲಿ

ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ–1 ಮತ್ತು ಭಾಗ–2 ಕರ್ನಾಟಕ ಪಾರದರ್ಶಕ ನಿಯಮ.

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಭೂ ಸ್ವಾಧೀನ ಕಾಯ್ದೆ

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆಗಳನ್ನು ಅನುಸರಿಸಲಾಗುತ್ತಿದೆ.

ಆಡಳಿತವನ್ನು ನಿರ್ವಹಿಸಲು

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು

ಕರ್ನಾಟಕ ಆರ್ಥಿಕ ಸಂಹಿತೆ

ಕರ್ನಾಟಕ ಖಜಾನಾ ಸಂಹಿತೆ

ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು ಇವುಗಳನ್ನು ಅನುಸರಿಸಲಾಗುತ್ತಿದೆ.

**2. ಆಡಳಿತ ಶಾಖೆ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ ಶಿರಸಿ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟೂ 21 ಹಾಗೂ ಹೆಚ್ಚುವರಿ ಸೂಪರ್ ನ್ಯೂಮರರಿ ಹುದ್ದೆ 1, ಒಟ್ಟೂ 22 ಹುದ್ದೆಗಳು ಇದ್ದು, ಇವುಗಳಲ್ಲಿ ಮಂಜೂರಾದ ಹುದ್ದೆಗಳಲ್ಲಿ 14 ಹಾಗೂ ಹೆಚ್ಚುವರಿ ಹುದ್ದೆ 1 ಒಟ್ಟೂ 15 ಜನ ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯನಿರ್ವಹಿಸುತ್ತಿರುವ ವರ್ಗ–ಎ–1, ವರ್ಗ–ಬಿ–1 , , ವರ್ಗ–ಸಿ–9,ಖಾಲಿ , ವರ್ಗ–ಡಿ–3ಹಾಗೂ ಸೂಪರ್ ನ್ಯೂಮರರಿ ಡಿ–1 ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ ಇಬ್ಬರು ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು, ಇವರಲ್ಲಿ ಒಬ್ಬರು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು, ಸಿಬ್ಬಂದಿ ವೇತನ ಬಿಲ್ಲು, ವಿದ್ಯುಚ್ಛಕ್ತಿ ಮತ್ತು ದೂರವಾಣಿ ಬಿಲ್ಲು ಹಾಗೂ ಸದರಿ ನೌಕರರ ರಜೆ ಇತ್ಯಾದಿಗಳ ನಿರ್ವಹಣೆ ಮತ್ತು ಸಿಬ್ಬಂದಿಗೆ ಸಂಬಂಧಪಟ್ಟ ನಿಯತಕಾಲಿಕೆಗಳನ್ನು ಸಲ್ಲಿಸುವ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರವರ ಆದೇಶಗಳ ಮೇರೆಗೆ ಕಾರ್ಯನಿರ್ವಹಿಸುತ್ತಾರೆ. ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

1) ಆಡಳಿತ ಶಾಖೆಯು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳ ಹಾಗೂ ಬಡ್ತಿಗಳ ಮತ್ತು ನಿವೃತ್ತಿ, ಪಿಂಚಣಿ, ರಜೆ ವಗೈರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಸಲ್ಲಿಸುವದು ಮತ್ತು ನಿರ್ವಹಿಸುವುದು.
2) ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ಧಪಡಿಸುವುದು ಮತ್ತು ಸಂಬಂಧಪಟ್ಟಂತೆ ಅನುದಾನ ವಗೈರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಯ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.
3) ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹನೆಗೆ ಸಲ್ಲಿಸುವುದು.
4) ಆಡಳಿತಕ್ಕೆ ಸಂಬಂಧಿಸಿದಂತೆ ಉಪ ವಿಭಾಗದ ಆಯವ್ಯಯ ಅಂದಾಜು ಪಟ್ಟಿಯ ವಿವರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲು ಸಿದ್ಧಪಡಿಸುವದು.
5) ಆಡಳಿತ ಶಾಖೆಯ ಇನ್ನೊಬ್ಬ ದ್ವಿತೀಯ ದರ್ಜೆ ಸಹಾಯಕರು ಕಛೇರಿಗೆ ಬರುವ ಮತ್ತು ಕಛೇರಿಯಿಂದ ಹೋಗುವ ಪತ್ರಗಳ ಸ್ವೀಕೃತಿ ಮತ್ತು ರವಾನೆ ಕಾರ್ಯದೊಂದಿಗೆ ವಿಭಾಗ ಕಛೇರಿಯಿಂದ ನೀಡುವ ಅಳತೆ ಪುಸ್ತಕಗಳು, ನಾಮಾಂಕಿತ ಸಮುದಾಯ ಹಾಜರಾತಿ ಪಟ್ಟಿ ಇವುಗಳ ದಾಖಲೆಗಳ ನಿರ್ವಹಣೆ ಹಾಗೂ ಅಂಚೆ ಚೀಟಿಗಳ ದಾಸ್ತಾನು ನಿರ್ವಹಣೆ ನಿರ್ವಹಿಸುತ್ತಾರೆ. ಇದರೊಂದಿಗೆ ವಾರ್ಷಿಕ ತಪಾಸಣಾ ವರದಿಗಳಿಗೆ ಪಾಲನಾ ವರದಿಯನ್ನು ಕ್ರೂಢೀಕರಿಸಿ ಸಲ್ಲಿಸುವ ಕಾರ್ಯನಿರ್ವಹಿಸುತ್ತಾರೆ.

**3. ಲೆಕ್ಕಪತ್ರ ಶಾಖೆ:**

ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಉಪ ವಿಭಾಗಕ್ಕೆ ಸಂಬಂಧಪಟ್ಟಂತೆ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ, ಬಾಕಿ ಬಿಲ್ಲುಗಳ ಪರಿಶೀಲನೆಯೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸುವುದು. ಹಣ ಭರವಸೆ ಪತ್ರ, ಬೇಡಿಕೆ ಪತ್ರ ಸಲ್ಲಿಸುವುದು. ಇದಲ್ಲದೇ ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಎಲ್ಲಾ ಪತ್ರ ವ್ಯವಹಾರಗಳನ್ನು ನಿರ್ವಹಿಸುವುದು.

**4. ಉಗ್ರಾಣ ಶಾಖೆ:**

ಈ ಇಲಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಿದ್ದಾರೆ. ದಾಸ್ತಾನು ಸಾಮಗ್ರಿಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳು ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ ಹಾಗೂ ಅವಶ್ಯವಿದ್ದಲ್ಲಿ ವಿಭಾಗ ಕಛೇರಿಗೆ ಬೇಡಿಕೆ ಪತ್ರ ಸಲ್ಲಿಸುವದು. ಕಛೇರಿಗೆ ಅವಶ್ಯವಿರುವ ಲೇಖನಿ ಸಾಮಗ್ರಿಗಳನ್ನು ಖರೀದಿಸುವದು. ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಯನ್ನು ಸಲ್ಲಿಸುವುದು. ಉಗ್ರಾಣಕ್ಕೆ ಸಂಬಂಧ ಪಟ್ಟ ಲೆಕ್ಕಪತ್ರ ಮಾಹಿತಿಗಳನ್ನು ವಿಭಾಗಕಛೇರಿಗೆ ಸಲ್ಲಿಸುವುದು.

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲಾ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ನೀಡಲಾಗುತ್ತಿದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತಿದೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಗುತ್ತಿಗೆದಾರರಿಗೆ ನಿವೇಶನವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಮಾರ್ಕ ಔಟ್ ನೀಡಿ ಕೆಲಸ ಚಾಲನೆ ಮಾಡುತ್ತಾರೆ. ಸಂಬಂಧಿಸಿದ ಸಹಾಯಕ/ಕಿರಿಯ ಇಂಜಿನೀಯರರು ದೈನಂದಿನ ನಿವೇಶನಕ್ಕೆ ಹೋಗಿ ಕೆಲಸದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ

ಇಂಜಿನೀಯರ್‌ರವರು ಆಗಿದ್ದಾಗ್ಗೆ ನಿವೇಶನಕ್ಕೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರು, ಮುಖ್ಯ ಇಂಜಿನೀಯರರು ನಿವೇಶನಕ್ಕೆ ಭೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರರು ಮತ್ತು ಮುಖ್ಯ ಇಂಜಿನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟ್ ಟೆಬಿಲಿಟಿ ಬಗ್ಗೆ ಮಹಾಲೇಖಪಾಲಕರು 2 ವರ್ಷಕ್ಕೊಮ್ಮೆ ಸಂಬಂಧಿತ ಉಪ ವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೇ ಮುಖ್ಯ ಇಂಜಿನೀಯರರವರ ಕಛೇರಿ, ಅಧೀಕ್ಷಕ ಇಂಜಿನೀಯರವರ ಕಛೇರಿ, ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿಯಿಂದಲೂ ಉಪ ವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಗಳ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ನಿವೇಶನವನ್ನು ಪರಿಶೀಲನೆ ಮಾಡಿ ಏನಾದರೂ ಕಳಪೆ ಕಾಮಗಾರಿಗಳಿದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

**ಕೈಪಿಡಿ–4**

ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಇಲಾಖೆ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ ಸರ್ಕಾರಿ ಆದೇಶ ಸಂಖ್ಯೆ:ಪಿಡಬ್ಲ್ಯೂ–1/ಎಫ್‌ಸಿಆರ್ 93/ಬೆಂಗಳೂರು ದಿನಾಂಕ:15–12–1994

ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ

ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ–1/ಟಿಎಫ್‌ಪಿ 2001 ಬೆಂಗಳೂರು ದಿನಾಂಕ: 02–02–2001

ಲೋಕೋಪಯೋಗಿ ಇಲಾಖೆ ಸಂಹಿತೆ

ಲೋಕೋಪಯೋಗಿ ಇಲಾಖೆ ಆರ್ಥಿಕ ಸಂಹಿತೆ

**ಕೈಪಿಡಿ–5**

ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಮಯಗಳು, ಸೂಚನೆಗಳು, ದಾಖಲೆಗಳು ಕೈಪಿಡಿಗಳ ವಿವರ.

ಕಛೇರಿ ಕೈಪಿಡಿ ನಿಯಮಗಳು, ವಿನಿಮಯಗಳು ಮತ್ತು ಸೂಚನೆಗಳು

ಕರ್ನಾಟಕ ನಾಗರಿಕ ಸೇವಾ ನಿಯಮಗಳು

ಕರ್ನಾಟಕ ಸರ್ಕಾರಿ (ವರ್ಗೀಕರಣ,ನಿಯಂತ್ರಣ ಮತ್ತು ಅಪೀಲು ನಿಯಮಗಳು)

ಕರ್ನಾಟಕ ಆರ್ಥಿಕ ಸಂಹಿತೆ

ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2ನ್ನು ಅನುಸರಿಸಲಾಗುವುದು.

ಉಗ್ರಾಣ ಕೈಪಿಡಿ

ಮಧ್ಯಸ್ಥಿಕೆ ಕಾಯ್ದೆ 1996

ಕರ್ನಾಟಕ ನೀರಾವರಿ ಕಾಯ್ದೆ 1965

ಸಾದಿಲ್ವಾರು ವೆಚ್ಚದ ಕೈಪಿಡಿ

ಕರ್ನಾಟಕ ಖಜಾನೆ ಸಂಹಿತೆ

ಚಾಲ್ತಿ ದರಪಟ್ಟಿ

ಬಜೆಟ್ ಕೈಪಿಡಿ

**ಕೈಪಿಡಿ–6**

ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತ:ಖ್ತೆ

**ತಾಂತ್ರಿಕ ಶಾಖೆ:**

1) ಕಾರ್ಯನಿರ್ವಾಹಕ ಇಂಜಿನೀಯರವರ, ಅಧೀಕ್ಷಕ ಇಂಜಿನೀಯರವರ ಮತ್ತು ಮುಖ್ಯ ಇಂಜಿನೀಯರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಮತ್ತು ಅದಕ್ಕೆ ಸಂಬಂಧಪಟ್ಟ ಕಡತಗಳು.
2) ಪ್ರಗತಿಯ ವರದಿಗಳು
3) ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ
4) ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ
5) ದರ ಸೂಚಿಕ

6) ಆಯವ್ಯಯ ಕಾಮಗಾರಿಗಳ ವಹಿ
7) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ

**ಪಿ.ಬಿ.ಯಲ್ಲಿರುವ ರಜಿಸ್ಟರ್ ಮಾಹಿತಿ**

1) ತುಂಡು ಗುತ್ತಿಗೆ ಪತ್ರ ಅನುಮೋದನೆ ರಜಿಸ್ಟರ್
2) ಸೇತುವೆಗಳ ರಜಿಸ್ಟರ್
3) ಕಟ್ಟಡಗಳ ರಜಿಸ್ಟರ್
4) ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜುಗಳ ಪಟ್ಟಿ

**ದಾಖಲೆಗಳು: ಆಡಳಿತ ಶಾಖೆ**

ಉಪ ವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ

1) ಹಾಜರಾತಿ ವಹಿ
2) ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ಮತ್ತು ಸಾಂದರ್ಭಿಕ ರಜೆ ಕಡತ ಅರ್ಜಿಗಳೊಂದಿಗೆ
3) ಸಂಘಟನಾ
4) ಮಂಜೂರಾದ ಕಾರ್ಯನಿರ್ವಹಿಸುತ್ತಿರುವ ಮತ್ತು ಖಾಲಿ ಹುದ್ದೆಗಳ ತ:ಖ್ತೆ
5) ಕೆಲಸ ವಿತರಣಾ ತ:ಖ್ತೆ
6) ವೇತನ ಬಡ್ತಿಯ ನಿಗಾ ವಹಿ
7) ವೇತನ ಬಡ್ತಿಯ ಮಂಜೂರಾತಿ ವಹಿ
8) ಇನ್‌ಕಂಬೆನ್ಸಿ ವಹಿ
9) ರಹಸ್ಯ ವರದಿಗಳ ವಹಿ
10) ಆಸ್ತಿ ಮತ್ತು ದಾಜಿಜತ್ವ ತ:ಖ್ತೆ ವಹಿ
11) ಮಹಾಲೇಖಪಾಲರು ಮತ್ತು ಇತರರಿಗೆ ಕಳುಹಿಸಲಾದ ನಿವೃತ್ತಿ ವೇತನ ಪತ್ರಗಳ ನಿಗಾವಹಿ
12) ಸೇವಾವಹಿ
13) ಇಲಾಖಾ ಪರೀಕ್ಷೆಗಳ ನಿಗಾ ವಹಿ
14) ಪರಿವೀಕ್ಷಣಾ ಟಿಪ್ಪಣಿ ಪುಸ್ತಕ
15) ಕಛೇರಿ ನೌಕರರ ಮನೆಗಳ ವಿಳಾಸ
16) ವಿಧಾನ ಸಭೆ/ಪರಿಷತ್ ಪ್ರಶ್ನೆಗಳ ವಹಿ
17) ವೈಯಕ್ತಿಕ ವಹಿ
18) ಪ್ರತಿ ಮಾಹೆಗಳ ಬಾಕಿ ಪಟ್ಟಿ
19) ಸ್ಟಾಂಪು ವಹಿ ಪರಿವೀಕ್ಷಣಾ ದಿನದಂದು ಬಾಕಿ ಇರುವ ಸ್ಟಾಂಪುಗಳ ಮತ್ತು ಸ್ಟಾಂಪುಗಳ ಬೆಲೆಯನ್ನು ತೋರಿಸುವ ತ:ಖ್ತೆ
20) ಸಾಮಾನ್ಯ ಸ್ವೀಕೃತಿ ವಹಿ
21) ರವಾನೆ ವಹಿ
22) ಸ್ಥಳೀಯ ವಿತರಣಾ ರವಾನೆ
23) ಕಛೇರಿ ಆದೇಶ ಪುಸ್ತಕ
24) ಸಾಮಾನ್ಯ ನಗದು ಪುಸ್ತಕ
25) ವೇತನ ಬಟವಡೆ ವಹಿ
26) ಪಯಾಣ ಭತ್ಯೆ ಬಟವಡೆ ವಹಿ
27) ಸಾದಿಲ್ವಾರು ವೆಚ್ಚ ವಹಿ ವೋಚರ್ ಗಳ ಸಂಹಿತೆ

**ಲೆಕ್ಕಪತ್ರ ಶಾಖೆ:**

1) ನಗದು ಪುಸ್ತಕ
2) ಚೆಕ್‌ಮೆಮೊ ಪುಸ್ತಕ
3) ಎಲ್.ಓ.ಸಿ.ರಜಿಸ್ಟರ್

4) ರೆಮಿಟನ್ಸ್ ರಜಿಸ್ಟರ್
5) ಚೆಕ್ ರಿಸೀವ್ಡ್ ರಜಿಸ್ಟರ್
6) ಎಸ್.ಬಿ.ಆರ್.ರಜಿಸ್ಟರ್
7) ಖಾಲಿ ಅಳತೆ ಪುಸ್ತಕಗಳ ವಹಿ
8) ಎಂ.ಪಿ.ಡಬ್ಲ್ಯೂ. ರಜಿಸ್ಟರ್
9) ಟಿ.ಇ.ಓ. ರಜಿಸ್ಟರ್
10) ವರ್ಕ್ಸ್ ರಜಿಸ್ಟರ್
11) ನಮೂನೆ–81
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕೆ

**ಉಗ್ರಾಣ ಶಾಖೆ:**

1) ದಾಸ್ತಾನು ಸ್ವೀಕೃತಿ ವಹಿ (ಪಿಡಬ್ಲ್ಯೂಎ–4)
2) ದಾಸ್ತಾನು ವಿತರಣಾ ವಹಿ (ಪಿಡಬ್ಲ್ಯೂಎ–4)
3) ದಾಸ್ತಾನು ಖರೀದಿ ಪುಸ್ತಕ
4) ಅರ್ಧ ವಾರ್ಷಿಕ ನಿಯತಕಾಲಿಕ ವಹಿ (ಪಿಡಬ್ಲ್ಯೂಎ–15)
5) ಖಾಲಿ ಸಾಮಗ್ರಿಗಳ (ಖಾಲಿ ಸಿಮೆಂಟ್ ಚೀಲ ಖಾಲಿ ಡಾಂಬರ್ ಬ್ಯಾರೆಲ್‌ಗಳ ವಹಿ(ಎಸ್ಎಂಜಿ–7)
6) ಖಾಲಿ ಅಳತೆ ಪುಸ್ತಕಗಳ ವಹಿ (ಪಿಡಬ್ಲ್ಯೂಜಿ–28)
7) ಲೇಖನ ಸಾಮಗ್ರಿಗಳ ಸ್ವೀಕೃತಿ ಮತ್ತು ವಿತರಣಾ ವಹಿ
8) ಕಛೇರಿ ಪೀಠೋಪಕರಣಗಳ ವಹಿ (ಕೆಎಫ್‌ಸಿ–34ಎ)
9) ಉಪಕರಣ ಮತ್ತು ಸ್ಥಿರಯಂತ್ರಗಳ ಸ್ವೀಕೃತಿ ವಹಿ (ಪಿಡಬ್ಲ್ಯೂಎ–4)
10) ಉಪಕರಣ ಮತ್ತು ಸ್ಥಿರಯಂತ್ರಗಳ ವಿತರಣಾ ವಹಿ (ಪಿಡಬ್ಲ್ಯೂಎ–4)
11) ಸೆಪ್ಟೆಂಬರ್‌ಅಂತ್ಯದಉಪಕರಣ ಮತ್ತುಸ್ಥಿರಯಂತ್ರಗಳ ವಾರ್ಷಿಕ ನಿಯತಕಾಲಿಕೆ (ಪಿಡಬ್ಲ್ಯೂಜಿ–17)
12) ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ (ಪಿಡಬ್ಲ್ಯೂಜಿ–17) ಬಿಡುಗಡೆಯಾದ ಸಾಮಗ್ರಿಗಳ ಲೆಕ್ಕದ ವಹಿ.

**ಕೈಪಿಡಿ–7**

ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

–––––– ಏನೂ ಇರುವುದಿಲ್ಲ ––––––

**ಕೈಪಿಡಿ–8**

ಇಲಾಖೆಯಲ್ಲಿ ನಿಗಮ/ ಪರಿಷತ್ತು/ಸಮಿತಿ ಮತ್ತು ಇತರೆ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

––––– ಏನೂ ಇರುವುದಿಲ್ಲ –––––

**ಕೈಪಿಡಿ–9**

ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಹಾಗೂ ಕಿರಿಯ ಇಂಜಿನೀಯರ್ ಇವರ ಅಧಿಕಾರದ ಬಗ್ಗೆ ಕೈಪಿಡಿ–2ರಲ್ಲಿ ಈಗಾಗಲೇ ತಿಳಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗೆ ನೀಡಿದೆ.**

| ಅ. ನಂ. | ಹುದ್ದೆ | ಹೆಸರು |
|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್–1 | ಶ್ರೀ ಕೆ.ಜಿ. ಹಿರೇಮಠ |
| 2 | ಸಹಾಯಕ ಇಂಜಿನೀಯರ್–2 | 1) ಶ್ರೀ ಚಂದ್ರಪ್ಪ ಆರ್.<br>2) ಶ್ರೀ ಎಂ.ಎ.ಐ.ಶೇಖ್ |

| ಅ. ನಂ. | ಹುದ್ದೆ | ಹೆಸರು |
|---|---|---|
| 3 | ಕಿರಿಯ ಇಂಜಿನೀಯರ್–6 | 1) ಶ್ರೀ ವಿ.ಎಂ. ಭಟ್ಟ<br>2) ಶ್ರೀ ನಾಗರಾಜ ನಾಯ್ಕ<br>3) ಶ್ರೀ ಲಕ್ಷ್ಮಣ ಕಟ್ಟಿಮನಿ<br>4) ಶ್ರೀ ನಾಗೇಶ ಬಿ. ನಾಯ್ಕ<br>5) ತೆರವಾಗಿದೆ.<br>6) ತೆರವಾಗಿದೆ. |
| 4 | ಪ್ರಥಮ ದರ್ಜೆ ಸಹಾಯಕರು–1 | ತೆರವಾಗಿದೆ. |
| 5 | ದ್ವಿತೀಯ ದರ್ಜೆ ಸಹಾಯಕರು–2 | 1) ಶ್ರೀ ಆರ್. ಶ್ರೀನಿವಾಸ್<br>2) ಶ್ರೀಮತಿ ಸಾವಿತ್ರಿ ಜಿ. ಭಟ್ಟ |
| 6 | ಬೆರಳಚ್ಚುಗಾರರು–1 | ಶ್ರೀಮತಿ ಪಾರ್ವತಿ ಎನ್. ನಾಯ್ಕ |
| 7 | ಪರಿವೀಕ್ಷಕ ತಾಂತ್ರಿಕರು–1 | ಶ್ರೀ ಎಸ್. ಎ. ಕರಿಕಟ್ಟಿ |
| 8 | ಕೆಲಸ ನಿರೀಕ್ಷಕರು–4 | 1) ಶ್ರೀ ಅಶೋಕ ಪಿ. ನಾಯ್ಕ<br>2) ತೆರವಾಗಿದೆ.<br>3) ತೆರವಾಗಿದೆ.<br>4) ತೆರವಾಗಿದೆ. |
| 9 | ಜವಾನರು–3 | 1) ಶ್ರೀ ಜಿ.ಎನ್. ಪಾಲೇಕರ್<br>2) ಶ್ರೀ ಗಜಾನನ ಜಿ. ಮೆಸ್ತಾ<br>3) ಶ್ರೀಮತಿ ಕಮಲಾ ಎಸ್. ಹಾನಗಲ್ |
| 10 | ಸೂಪರ್‌ನ್ಯೂಮರರಿ ಸಿಬ್ಬಂದಿ ಕ್ಲೀನರ್ | ಶ್ರೀ ಪ್ರಕಾಶ ಜಿ. ದೇವಳಕರ್ |

**ಕೈಪಿಡಿ–10**

ಇಲಾಖೆಯ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ತಿಂಗಳ ವೇತನ/ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗಿದೆ.

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್–1 | ಶ್ರೀ ಕೆ.ಜಿ. ಹಿರೇಮಠ | 14050–25050 | 25050 |
| 2. | ಸಹಾಯಕ ಇಂಜಿನೀಯರ್–2 | 1) ಶ್ರೀ ಚಂದ್ರಪ್ಪ ಡಿ.ಎಚ್. | 11400–21600 | 11700 |
| | | 2) ಶ್ರೀ ಎಂ.ಎ.ಐ.ಶೇಖ್ | 11400–21600 | |
| 3. | ಕಿರಿಯ ಇಂಜಿನೀಯರ್–6 | 1) --- ತೆರವು --- | 11400–21600 | |
| | | 2) --- ತೆರವು | 11400–21600 | |

| ಅ. ನಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| | | 3) ಶ್ರೀ ವಿ.ಎಂ. ಭಟ್ಟ | 11400–21600 | 15200 |
| | | 4) ಶ್ರೀ ನಾಗರಾಜ ನಾಯ್ಕ | 8825–16000 | 9750 |
| | | 5) ಶ್ರೀ ಲಕ್ಷ್ಮಣ ಕಟ್ಟಿಮನಿ | 8828–16000 | |
| | | 6) ಶ್ರೀ ನಾಗೇಶ ಬಿ. ನಾಯ್ಕ | 8825–16000 | |
| 4) | ಪ್ರಥಮ ದರ್ಜೆ ಸಹಾಯಕರು–1 | --- ತೆರವು --- | 7275–13350 | |
| 5) | ದ್ವಿತೀಯ ದರ್ಜೆ ಸಹಾಯಕರು–2 | 1) ಶ್ರೀ ಶ್ರೀನಿವಾಸ್ ಆರ್. | 5800–10500 | 9750 |
| | | 2)ಶ್ರೀಮತಿ ಸಾವಿತ್ರಿ ಜಿ. ಭಟ್ಟ | 5800–10500 | 11700 |
| 6) | ಬೆರಳಚ್ಚುಗಾರರು–1 | 1) ಶ್ರೀಮತಿ ಪಾರ್ವತಿ ಎನ್. ನಾಯ್ಕ | 5800–10500 | 7625 |
| 7) | ಪರಿವೀಕ್ಷಕ ತಾಂತ್ರಿಕರು–1 | 1) ಶ್ರೀ ಎಸ್.ಎ. ಕರಿಕಟ್ಟಿ | 6250–12000 | 13000 |
| 8) | ಜವಾನರು–3 | 1) ಶ್ರೀ ಜಿ.ಎನ್. ಪಾಲೇಕರ್ | 4800–7275 | 9500 |
| | | 2) ಶ್ರೀ ಗಜಾನನ ಜಿ.ಮೆಸ್ತಾ | 4800–7275 | 6650 |
| | | 3)ಶ್ರೀಮತಿ ಕಮಲಾ ಎಸ್. ಹಾನಗಲ್ | 4800–7275 | 5400 |
| 9) | ಸೂಪರ್‌ನ್ಯೂಮರರಿ ಸಿಬ್ಬಂದಿ ಕ್ಲೀನರ್–1 | 1) ಶ್ರೀ ಪ್ರಕಾಶ ಜಿ. ದೇವಳಕರ್ | 4800–7275 | 9050 |
| 10) | ಕೆಲಸ ನಿರೀಕ್ಷಕರು | 1) ಶ್ರೀ ಅಶೋಕ ಪಿ. ನಾಯ್ಕ | 5800–10500 | 9275 |
| | | 2) ತೆರವು | 5800–10500 | |
| | | 3) ತೆರವು | 5800–10500 | |
| | | 4) ತೆರವು | 5800–10500 | |

**ಕೈಪಿಡಿ–11**

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 1) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ತೆರೆದ ಬಾವಿ ಮುಂದುವರೆದದ್ದು, ನಿರ್ಮಾಣ ಹಾಗೂ ದುರಸ್ತಿ<br>2007–08 (ಅಂದಾಜು ರೂ. 8.10ಲಕ್ಷ) (12ನಂ.)<br>2008–09 (ಅಂದಾಜು ರೂ. 9.80ಲಕ್ಷ) (12 ನಂ.) | 5.92 | 5.04 | 6.38 | 3.24 |
| 2) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ತೆರೆದ ಬಾವಿ ಹೊಸ ಕಾಮಗಾರಿಗಳು, ನಿರ್ಮಾಣ ಹಾಗೂ ದುರಸ್ತಿ<br>2007–08 (ಅಂದಾಜು ರೂ. 22.00ಲಕ್ಷ) (29ನಂ.)<br>2008–09 (ಅಂದಾಜು ರೂ. 35.45ಲಕ್ಷ) (42ನಂ) | 21.4 | 13.27 | 35.55 | 10.24 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 3) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಕೊಳವೆ ಬಾವಿ ನಿರ್ಮಾಣ ಮತ್ತು ಫ್ಲಶಿಂಗ್ ಹಾಗೂ ದುರಸ್ತಿ<br>2007–08 (ಅಂದಾಜು ರೂ. 7.75ಲಕ್ಷ) (7ನಂ.)<br>2008–09 (ಅಂದಾಜು ರೂ. 5.62ಲಕ್ಷ) (6ನಂ.) | 5.75 | 1.38 | 5.25 | 1.98 |
| 4) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಝರಿನೀರು ಯೋಜನೆ ,ಮುಂದುವರೆದದ್ದು , ನಿರ್ಮಾಣ<br>2007–08 (ಅಂದಾಜು ರೂ. 1.50ಲಕ್ಷ) (1ನಂ.)<br>2008–09 (ಅಂದಾಜು ರೂ. 1.00ಲಕ್ಷ) (1ನಂ.) | 1.50 | 1.50 | 1.00 | 0.94 |
| 5) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಝರಿನೀರು ಯೋಜನೆ ,ಹೊಸ ಕಾಮಗಾರಿಗಳು ನಿರ್ಮಾಣ ಮತ್ತು ವಿಸ್ತರಣೆ<br>2007–08 (ಅಂದಾಜು ರೂ. 4.00ಲಕ್ಷ) (4ನಂ.)<br>2008–09 (ಅಂದಾಜು ರೂ. 6.80ಲಕ್ಷ) (6ನಂ.) | 3.50 | 0.99 | 6.70 | 0.80 |
| 6) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಕಿರು ನೀರು ಯೋಜನೆ ,ಮುಂದುವರೆದದ್ದು , ವಿಸ್ತರಣೆ ಮತ್ತು ಸುಧಾರಣೆ<br>2007–08 (ಅಂದಾಜು ರೂ. 2.75ಲಕ್ಷ) (2ನಂ.) | 2.75 | 2.72 | – | – |
| 7) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಕಿರು ನೀರು ಯೋಜನೆ ,ಹೊಸ ಕಾಮಗಾರಿಗಳು ನಿರ್ಮಾಣ ಮತ್ತು ಸುಧಾರಣೆ<br>2008–09(ಅಂದಾಜು ರೂ. 8.80ಲಕ್ಷ) (2ನಂ.) | – | – | 8.80 | – |
| 8) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಕೊಳವೆ ನೀರು ಯೋಜನೆ ,ಮುಂದುವರೆದದ್ದು, ವಿಸ್ತರಣೆ ಮತ್ತು ಸುಧಾರಣೆ.<br>2007–08 (ಅಂದಾಜು ರೂ. 30.55ಲಕ್ಷ) (7ನಂ.)<br>2008–09 (ಅಂದಾಜು ರೂ. 37.45ಲಕ್ಷ) (9ನಂ.) | 28.80 | 10.95 | 25.13 | 15.88 |
| 9) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಕೊಳವೆ ನೀರು ಯೋಜನೆ ,ಹೊಸ ಕಾಮಗಾರಿಗಳು ನಿರ್ಮಾಣ ಮತ್ತು ಸುಧಾರಣೆ.<br>2007–08 (ಅಂದಾಜು ರೂ. 17.80ಲಕ್ಷ) (10ನಂ.)<br>2008–09 (ಅಂದಾಜು ರೂ. 80.08ಲಕ್ಷ) (35ನಂ.) | 15.40 | 8.76 | 80.08 | 12.16 |
| 10) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ,<br>ತೆರೆದ ಬಾವಿ ಮುಂದುವರೆದದ್ದು, ನಿರ್ಮಾಣ ಮತ್ತು ದುರಸ್ಥಿ.<br>2007–08 (ಅಂದಾಜು ರೂ. 54.70ಲಕ್ಷ) (77ನಂ.)<br>2008–09 (ಅಂದಾಜು ರೂ. 26.20ಲಕ್ಷ) (36ನಂ.) | 42.29 | 39.94 | 18.12 | 14.06 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 11) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ತೆರೆದ ಬಾವಿ ಹೊಸ ಕಾಮಗಾರಿಗಳು , ನಿರ್ಮಾಣ ಮತ್ತು ದುರಸ್ಥಿ.<br>2007–08 (ಅಂದಾಜು ರೂ. 50.10ಲಕ್ಷ) (67ನಂ.)<br>2008–09 (ಅಂದಾಜು ರೂ. 116.65ಲಕ್ಷ) (146ನಂ.) | 46.25 | 24.70 | 117.43 | 46.56 |
| 12) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಕೊಳವೆ ಬಾವಿ ಮುಂದುವರೆದದ್ದು, ನಿರ್ಮಾಣ ಮತ್ತು ಫ್ಲಶಿಂಗ್.<br>2007–08 (ಅಂದಾಜು ರೂ. 7.80ಲಕ್ಷ) (10ನಂ.)<br>2008–09 (ಅಂದಾಜು ರೂ. 3.30ಲಕ್ಷ) (4ನಂ.) | 6.85 | 4.17 | 1.69 | – |
| 13) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಕೊಳವೆ ಬಾವಿ ಹೊಸ ಕಾಮಗಾರಿಗಳು, ನಿರ್ಮಾಣ ಮತ್ತು ಫ್ಲಶಿಂಗ್.<br>2007–08 (ಅಂದಾಜು ರೂ. 3.30ಲಕ್ಷ) (6ನಂ.)<br>2008–09 (ಅಂದಾಜು ರೂ. 13.05ಲಕ್ಷ) (28ನಂ.) | 3.30 | – | 13.05 | 4.39 |
| 14) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಝರಿನೀರು ಯೋಜನೆ ಮುಂದುವರೆದದ್ದು, ನಿರ್ಮಾಣ ಮತ್ತು ವಿಸ್ತರಣೆ<br>2007–08 (ಅಂದಾಜು ರೂ. 4.50ಲಕ್ಷ) (5ನಂ.)<br>2008–09 (ಅಂದಾಜು ರೂ. 1.60ಲಕ್ಷ) (2ನಂ.) | 4.18 | 3.86 | 0.95 | 0.72 |
| 15) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಝರಿನೀರು ಯೋಜನೆ ಹೊಸ ಕಾಮಗಾರಿಗಳು, ನಿರ್ಮಾಣ ಮತ್ತು ವಿಸ್ತರಣೆ<br>2007–08 (ಅಂದಾಜು ರೂ. 3.90ಲಕ್ಷ) (5ನಂ.)<br>2008–09 (ಅಂದಾಜು ರೂ. 19.80ಲಕ್ಷ) (10ನಂ.) | 3.90 | 2.30 | 19.80 | 0.82 |
| 16) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಕಿರು ನೀರು ಯೋಜನೆ ಮುಂದುವರೆದದ್ದು, ವಿಸ್ತರಣೆ ಮತ್ತು ಸುಧಾರಣೆ<br>2007–08 (ಅಂದಾಜು ರೂ. 3.90ಲಕ್ಷ) (5ನಂ.)<br>2008–09 (ಅಂದಾಜು ರೂ. 19.80ಲಕ್ಷ) (10ನಂ.) | 21.49 | 10.57 | 13.46 | 8.63 |
| 17) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ,<br>ಕಿರು ನೀರು ಯೋಜನೆ ಹೊಸ ಕಾಮಗಾರಿಗಳು, ನಿರ್ಮಾಣ ಮತ್ತು ಸುಧಾರಣೆ<br>2007–08 (ಅಂದಾಜು ರೂ. 3.70ಲಕ್ಷ) (5ನಂ.)<br>2008–09 (ಅಂದಾಜು ರೂ. 72.30ಲಕ್ಷ) (25ನಂ.) | 3.45 | 3.05 | 72.60 | 19.85 |
| 18) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಕೊಳವೆ ನೀರು ಯೋಜನೆ ಮುಂದುವರೆದದ್ದುವಿಸ್ತರಣೆ ಮತ್ತು ಸುಧಾರಣೆ<br>2007–08 (ಅಂದಾಜು ರೂ. 60.80ಲಕ್ಷ) (13ನಂ.)<br>2008–09 (ಅಂದಾಜು ರೂ. 48.20ಲಕ್ಷ) (8ನಂ.) | 58.48 | 42.58 | 18.29 | 10.80 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 19) | 4215–01–102–9–04ಗ್ರಾ.ನೀ.ಸ.ಕೇಂದ್ರ ವಲಯ, ಕೊಳವೆ ನೀರು ಯೋಜನೆ ಹೊಸ ಕಾಮಗಾರಿಗಳು ನಿರ್ಮಾಣ ಮತ್ತು ಸುಧಾರಣೆ<br>2007–08 (ಅಂದಾಜು ರೂ. 2.45ಲಕ್ಷ) (7ನಂ.)<br>2008–09 (ಅಂದಾಜು ರೂ. 251.60ಲಕ್ಷ)(112ನಂ.) | 2.45 | 0.50 | 251.40 | 44.37 |
| 20) | 4215–01–102–9–01 ಗ್ರಾ.ನೀ.ಸ.ರಾಜ್ಯ ವಲಯ, ಸುವರ್ಣ ಜಲ ಯೋಜನೆ, ಸರ್ಕಾರಿ ಕಾಲೇಜುಗಳಿಗೆ ಮಳೆಕೊಯ್ಲು ನೀರು ಪೂರಣ<br>2007–08 (ಅಂದಾಜು ರೂ. 18.10ಲಕ್ಷ) (46ನಂ.) | 18.10 | 14.56 | – | – |
| 21) | 4215–01–102–9–04 ಅಂತ:ರ್ಜಲ ಅಭಿವೃದ್ಧಿ ಯೋಜನೆ ಕೇಂದ್ರ ವಲಯ<br>2007–08 (ಅಂದಾಜು ರೂ. 4.50ಲಕ್ಷ) (4ನಂ.)<br>2008–09 (ಅಂದಾಜು ರೂ. 5.50ಲಕ್ಷ)(6ನಂ.) | 4.50 | 3.04 | 2.46 | 2.13 |
| 22) | 4215–01–102–9–01 ಅಂತ:ರ್ಜಲ ಅಭಿವೃದ್ಧಿ ಯೋಜನೆ ರಾಜ್ಯ ವಲಯ,<br>2007–08 (ಅಂದಾಜು ರೂ. 5.50ಲಕ್ಷ) (7ನಂ.) | 5.50 | 4.08 | 1.42 | 1.19 |
| 23) | 2245 ಪ್ರಕೃತಿ ವಿಕೋಪ ಕಾಮಗಾರಿಗಳು<br>2007–08(ಅಂದಾಜು ರೂ.8.80ಲಕ್ಷ)(20 ನಂ.)<br>2008–09(ಅಂದಾಜು ರೂ. 17.30ಲಕ್ಷ)(10ನಂ) | 8.00 | 5.69 | 8.00 | – |
| 24) | 2245 ಎಂ.ಪಿ. ಅನುದಾನ<br>2007–08(ಅಂದಾಜು ರೂ.20.50ಲಕ್ಷ)(6 ನಂ.)<br>2008–09(ಅಂದಾಜು ರೂ. 43.00ಲಕ್ಷ)(14ನಂ) | 20.50 | 7.08 | 43.00 | – |
| 25) | 2245 ಎಂ.ಎಲ್.ಸಿ. ಅನುದಾನ<br>2007–08(ಅಂದಾಜು ರೂ.3.00ಲಕ್ಷ)(1ನಂ.) | 3.00 | – | – | – |
| 26) | 2245 ಎಂ.ಎಲ್.ಎ. ಅನುದಾನ<br>2007–08(ಅಂದಾಜು ರೂ.22.50ಲಕ್ಷ)(26 ನಂ.)<br>2008–09(ಅಂದಾಜು ರೂ. 16.00ಲಕ್ಷ)(7ನಂ) | 22.50 | 7.45 | 16.00 | – |
| 27) | 2245 ಡಿ.ಸಿ. ಅನುದಾನ ಕು.ನೀ.ಸ.ಯೋಜನೆ<br>2007–08(ಅಂದಾಜು ರೂ.6.00ಲಕ್ಷ)(8ನಂ.) | 3.00 | 1.50 | – | – |
| 28) | ಜಿಲ್ಲಾ ಪಂಚಾಯತ್ ಅಭಿವೃದ್ಧಿ ಅನುದಾನ ಕಾಮಗಾರಿಗಳು<br>2007–08 (ಅಂದಾಜು ರೂ. 0.70ಲಕ್ಷ)(1ನಂ.)<br>2008–09(ಅಂದಾಜು ರೂ. 3.00ಲಕ್ಷ)(3ನಂ.) | 0.70 | 0.54 | 3.00 | 2.42 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 29) | ನಬಾರ್ಡ್–RIDF ಪಶು ಚಿಕಿತ್ಸಾಲಯ ಕೇಂದ್ರ ಕಟ್ಟಡಗಳು<br>2007–08(ಅಂದಾಜು ರೂ.53.50ಲಕ್ಷ) (6ನಂ.)<br>2008–09(ಅಂದಾಜು ರೂ.44.90(5ನಂ.) | 12.39 | 10.32 | – | 16.30 |
| 30) | ನಬಾರ್ಡ್–RIDF ಅಂಗನವಾಡಿ ಕಟ್ಟಡಗಳು<br>2007–08(ಅಂದಾಜು ರೂ.7.20ಲಕ್ಷ) (6ನಂ.)<br>2008–09(ಅಂದಾಜು ರೂ.17.55(6 ನಂ.) | 7.20 | – | – | 5.34 |
| 31) | ನಬಾರ್ಡ್–RIDF ಪ್ರೌಢಶಾಲಾ ಕಟ್ಟಡಗಳು<br>2007–08(ಅಂದಾಜು ರೂ.44.00ಲಕ್ಷ) (3ನಂ.)<br>2008–09(ಅಂದಾಜು ರೂ.4.00(1ನಂ.) | – | – | – | – |
| 32) | 11ನೇ ಹಣಕಾಸು<br>2007–08(ಅಂದಾಜು ರೂ. 1.25)(3ನಂ)<br>2008–09(ಅಂದಾಜು ರೂ. 1.25)(1ನಂ.) | 1.25 | 0.25 | – | 0.97 |
| 33) | ನಬಾರ್ಡ್–RIDF ಪದವಿಪೂರ್ವ ಕಾಲೇಜ್ ಕಟ್ಟಡಗಳು<br>2008–09(ಅಂದಾಜು ರೂ.12.00)(3ನಂ.) | – | – | – | – |
| 34) | ಟಾಸ್ಕ್ ಫೋರ್ಸ್ ರಾಜ್ಯವಲಯ<br>ನೀರು ಸರಬರಾಜು ಯೋಜನೆ<br>2007–08(ಅಂದಾಜು ರೂ. 4.19ಲಕ್ಷ)(6ನಂ.)<br>2008–09(ಅಂದಾಜು ರೂ.20.00ಲಕ್ಷ )(18ನಂ.) | 4.19 | 3.32 | – | – |
| 35) | ಕುಗ್ರಾಮ ಸುಗ್ರಾಮ ಯೋಜನೆ<br>2007–08(ಅಂದಾಜು ರೂ. 20.00ಲಕ್ಷ)(1ನಂ.) | – | – | – | – |
| 36) | ಸುವರ್ಣ ಗ್ರಾಮೋದಯ ಯೋಜನೆ<br>2007–08(ಅಂದಾಜು ರೂ. 102.50ಲಕ್ಷ)(7ನಂ.)<br>2008–09(ಅಂದಾಜು ರೂ.141.96ಲಕ್ಷ )(7ನಂ.) | 58.57 | 12.15 | 141.96 | 63.23 |
| 37) | ಸಾಮರ್ಥ್ಯ ಸೌಧ<br>2007–08(ಅಂದಾಜು ರೂ. 17.00ಲಕ್ಷ)(1ನಂ.)<br>2008–09(ಅಂದಾಜು ರೂ.17.00ಲಕ್ಷ )(1ನಂ.) | 17.00 | 5.54 | – | 11.46 |
| 38) | ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ<br>2007–08(ಅಂದಾಜು ರೂ. 100.32ಲಕ್ಷ)(76ನಂ.)<br>2008–09(ಅಂದಾಜು ರೂ.105.80ಲಕ್ಷ )(75ನಂ.) | 100.32 | – | 83.69 | 84.53 |
| 39) | ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ<br>ಯೋಜನೆ ಹೆಚ್ಚುವರಿ ಅನುದಾನ<br>2007–08(ಅಂದಾಜು ರೂ. 79.00ಲಕ್ಷ)(3ನಂ.)<br>2008–09(ಅಂದಾಜು ರೂ.60.00ಲಕ್ಷ )(4ನಂ.) | 19.00 | 14.23 | 60.00 | 54.11 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 40) | ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ ನಿರ್ವಹಣೆ 2007–08(ಅಂದಾಜು ರೂ. 33.44ಲಕ್ಷ)(66 ನಂ.) | 33.44 | 30.09 | – | – |
| 41) | 5054–04–337–01ಗ್ರಾಮೀಣ ಸಂಪರ್ಕ ರಸ್ತೆ ಮತ್ತು ಸೇತುವೆ 2007–08(ಅಂದಾಜು ರೂ. 6.42ಲಕ್ಷ)(5ನಂ.) 2008–09(ಅಂದಾಜು ರೂ.84.85ಲಕ್ಷ )(30ನಂ.) | 6.42 | 6.35 | 70.70 | 35.41 |
| 42) | 5054–03–101–01–72 ಕಾಲುಸಂಕಗಳು/ಕಿರು ಸೇತುವೆ 2007–08(ಅಂದಾಜು ರೂ. 14.00ಲಕ್ಷ)(4ನಂ.) 2008–09(ಅಂದಾಜು ರೂ.26.17ಲಕ್ಷ )(14ನಂ.) | 14.00 | 1.30 | 26.17 | 0.32 |
| 43) | 5054–04–337–7–02 ಹೊಸ ಸೇತುವೆ ಮತ್ತು ಅಡಿಗಾಲುವೆ 2007–08(ಅಂದಾಜು ರೂ. 3.51ಲಕ್ಷ)(1ನಂ.) | 3.51 | 3.46 | – | – |
| 44) | 5054 ಗ್ರಾಮೀಣ ಸಂಪರ್ಕ ರಸ್ತೆ ಹೆಚ್ಚುವರಿ ಅನುದಾನದ ಕಾಮಗಾರಿಗಳು 2007–08(ಅಂದಾಜು ರೂ. 10.00ಲಕ್ಷ)(2ನಂ.) (ಭಾಗ–1) 2008–09(ಅಂದಾಜು ರೂ.84.85ಲಕ್ಷ )(30ನಂ)(ಭಾಗ–2) | – | – | 10.00<br>30.00 | 8.24<br>18.87 |
| 45) | 5054–04–337–01–132 ಗ್ರಾಮೀಣ ಸಂಪರ್ಕ ರಸ್ತೆ 2007–08(ಅಂದಾಜು ರೂ. 10.00ಲಕ್ಷ)(4ನಂ.) | 10.00 | 5.42 | – | – |
| 46) | 12ನೇ ಹಣಕಾಸು ಆಯೋಗದ ಶಿಫಾರಸ್ಸಿನ ಯೋಜನೆಯಡಿ ಕಟ್ಟಡ ಕಾಮಗಾರಿಗಳು 2007–08(ಅಂದಾಜು ರೂ. 8.63ಲಕ್ಷ)(12ನಂ.) 2008–09(ಅಂದಾಜು ರೂ.7.20ಲಕ್ಷ)(13ನಂ.) | 8.63 | 5.52 | – | – |
| 47) | 2210–01–101–1–76 ಆಯುರ್ವೇದ ಕಟ್ಟಡಗಳು 2007–08(ಅಂದಾಜು ರೂ. 5.00ಲಕ್ಷ)(1ನಂ.) 2008–09(ಅಂದಾಜು ರೂ.10.00ಲಕ್ಷ)(2 ನಂ.) | 5.00 | 1.53 | 5.00 | 4.09 |
| 48) | 5054 ಗ್ರಾಮೀಣ ಸಂಪರ್ಕದಡಿ ಕಾಲುಸಂಕ(2ನೇ ಕಂತು) 2007–08(ಅಂದಾಜು ರೂ. 15.00ಲಕ್ಷ)(14ನಂ.) | 15.17 | 1.95 | – | – |
| 49) | 2401–00–800–0–04–06 ಕೃಷಿ ಇಲಾಖೆ 2008–09(ಅಂದಾಜು ರೂ. 1.50ಲಕ್ಷ)(3ನಂ.) | – | – | 0.50 | 1.57 |
| 50) | 12ನೇ ಹಣಕಾಸು ಆಯೋಗದ ಶಿಫಾರಸ್ಸಿನ ಯೋಜನೆಯಡಿ ಕಟ್ಟಡ ಕಾಮಗಾರಿಗಳ ನಿರ್ವಹಣೆ 2007–08(ಅಂದಾಜು ರೂ. 2.92ಲಕ್ಷ)(8 ನಂ.) 2008–09(ಅಂದಾಜು ರೂ.7.20ಲಕ್ಷ)(10ನಂ.) | 2.92 | 2.46 | 7.20 | 0.55 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 51) | 12ನೇ ಹಣಕಾಸು ಯೋಜನೆ ರಸ್ತೆ ನಿರ್ವಹಣೆ 2007–08(ಅಂದಾಜು ರೂ146.91ಲಕ್ಷ)(170 ನಂ.) 2008–09(ಅಂದಾಜು ರೂ.131.00ಲಕ್ಷ)(33ನಂ.) | 146.91 | 137.76 | 131.00 | 116.87 |
| 52) | 12ನೇ ಹಣಕಾಸು ಯೋಜನೆ ರಸ್ತೆ ಅಭಿವೃದ್ಧಿ ಕಾಮಗಾರಿಗಳು 2008–09(ಅಂದಾಜು ರೂ.192.35ಲಕ್ಷ)(63ನಂ.) | – | – | 153.88 | 8.08 |
| 53) | 12ನೇ ಹಣಕಾಸು ಯೋಜನೆ ಕಟ್ಟಡ ಸಾಮಾನ್ಯ 2008–09(ಅಂದಾಜು ರೂ.8.57ಲಕ್ಷ)(7ನಂ.) | – | – | 8.57 | 6.71 |
| 54) | 12ನೇ ಹಣಕಾಸು ಅನುದಾನದ ಕಟ್ಟಡಗಳ ವಿಶೇಷ ದುರಸ್ತಿ. 2007–08(ಅಂದಾಜು ರೂ9.37ಲಕ್ಷ)(11 ನಂ.) 2008–09(ಅಂದಾಜು ರೂ.7.66ಲಕ್ಷ)(13ನಂ.) | 8.57 | 6.56 | 7.66 | 3.97 |
| 55) | 4702 ಚಿಕ್ಕ ನೀರಾವರಿ ಕೆರೆಗಳ ಅಭಿವೃದ್ಧಿ 2007–08(ಅಂದಾಜು ರೂ. 0.90ಲಕ್ಷ)(2ನಂ.) | 0.90 | 0.70 | – | – |
| 56) | 2705 ಚಿಕ್ಕ ನೀರಾವರಿ ಕೆರೆಗಳ ನಿರ್ವಹಣೆ 2007–08(ಅಂದಾಜು ರೂ5.41ಲಕ್ಷ)(12 ನಂ.) 2008–09(ಅಂದಾಜು ರೂ.3.00ಲಕ್ಷ)(5ನಂ.) | 5.41 | – | 3.00 | 2.72 |
| 57) | 2401–00–119–6–71 ತೋಟಗಾರಿಕಾ ಇಲಾಖೆ 2007–08(ಅಂದಾಜು ರೂ8.34ಲಕ್ಷ)(6 ನಂ.) 2008–09(ಅಂದಾಜು ರೂ.10.50ಲಕ್ಷ)(4ನಂ.) | 8.34 | 6.2 | 6.00 | 5.62 |
| 58) | 2401–00–800–2–27 ತೋಟಗಾರಿಕಾ ರಾಜ್ಯ ವಲಯ 2008–09(ಅಂದಾಜು ರೂ.11.00ಲಕ್ಷ) | – | – | – | – |
| 59) | 2210–03–01–0–73 ಆರೋಗ್ಯ ಇಲಾಖೆ ಕಟ್ಟಡ ದುರಸ್ತಿ. 2008–09(ಅಂದಾಜು ರೂ.3.00ಲಕ್ಷ)(2ನಂ.) | – | – | 2.00 | 1.99 |
| 60) | 2210–03–01–0–73 ಆರೋಗ್ಯ ಇಲಾಖೆ ಕಟ್ಟಡ ನಿರ್ವಹಣೆ 2007–08(ಅಂದಾಜು ರೂ.2.00ಲಕ್ಷ)(4ನಂ.) | 2.00 | 1.45 | – | – |
| 61) | 2210–0–110–0–06 ಆರೋಗ್ಯ ಇಲಾಖೆ RIDF ನಬಾರ್ಡ್ ಯೋಜನೆ ಕಟ್ಟಡ 2007–08(ಅಂದಾಜು ರೂ.34.00ಲಕ್ಷ)(1ನಂ.) | – | – | – | – |
| 62) | 2403–00–101–0–61 ಪಶುಪಾಲನೆ ಪಶುವೈದ್ಯ ಸೇವೆ 2007–08(ಅಂದಾಜು ರೂ.3.00ಲಕ್ಷ)(4ನಂ.) 2008–09(ಅಂದಾಜು ರೂ.2.10ಲಕ್ಷ)(5ನಂ.) | 3.00 | 2.80 | 2.10 | 2.06 |

| ಕ್ರ. ಸಂ. | ಲೆಕ್ಕಶೀರ್ಷಿಕೆ | 2007–08 | | 2008–09 | |
|---|---|---|---|---|---|
| | | ಅನುದಾನ | ವೆಚ್ಚ | ಅನುದಾನ | ವೆಚ್ಚ |
| 1 | 2 | 3 | 4 | 5 | 6 |
| 63) | 2225–03–800–0–53 ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ 2007–08(ಅಂದಾಜು ರೂ.2.00ಲಕ್ಷ)(1ನಂ.) 2008–09(ಅಂದಾಜು ರೂ.3.50ಲಕ್ಷ)(2ನಂ.) | 2.00 | 1.87 | – | 3.99 |
| 64) | 2401–00–001 ಸಸ್ಯ ಸಂಗೋಪನೆ 2008–09(ಅಂದಾಜು ರೂ.2.50ಲಕ್ಷ)(2ನಂ.) | – | – | 2.50 | – |
| 65) | 2401–00–113–4–05ಕೃಷಿ ಕ್ಷೇತ್ರ ಮತ್ತು ನರ್ಸರಿ 2008–09(ಅಂದಾಜು ರೂ.1.00ಲಕ್ಷ)(1ನಂ.) | – | – | 1.00 | – |
| 66) | 2405–00–001–10–65ಮೀನುಮರಿ ಉತ್ಪಾದನೆ 2008–09(ಅಂದಾಜು ರೂ.0.51ಲಕ್ಷ)(1ನಂ.) | – | – | 0.50 | 0.49 |
| 67) | 2202–02–109–077 ಪ್ರೌಢಶಾಲೆ ಕಟ್ಟಡಗಳ ನಿರ್ಮಾಣ ಮತ್ತು ಸುಧಾರಣೆ. 2007–08(ಅಂದಾಜು ರೂ3.50ಲಕ್ಷ)(2 ನಂ.) 2008–09(ಅಂದಾಜು ರೂ.0.80ಲಕ್ಷ)(1ನಂ.) | 3.50 | 3.48 | – | – |
| 68) | ಸರ್ವಶಿಕ್ಷ ಅಭಿಯಾನ C.R.C. ಕಟ್ಟಡಗಳು 2007–08(ಅಂದಾಜು ರೂ4.00ಲಕ್ಷ)(2 ನಂ.) 2008–09(ಅಂದಾಜು ರೂ.6.00ಲಕ್ಷ)(3ನಂ.) | 4.00 | 1.92 | – | – |
| 69) | 2202–02–109–077ಸೇರ್ಪಡೆ ಮತ್ತು ಮಾರ್ಪಾಡು 2008–09(ಅಂದಾಜು ರೂ.3.03ಲಕ್ಷ)(1ನಂ.) | – | – | 3.03 | 2.87 |
| 70) | ಮಲೆನಾಡು ಪ್ರದೇಶಾಭಿವೃದ್ಧಿ ಯೋಜನೆ (M.A.D.B.) 2007–08(ಅಂದಾಜು ರೂ4.00ಲಕ್ಷ)(2 ನಂ.) 2008–09(ಅಂದಾಜು ರೂ.6.00ಲಕ್ಷ)(3ನಂ.) | 17.00 | – | 17.00 | 15.30 |

**ಕೈಪಿಡಿ–12**

ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ನೀಡಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ವಾಚನಾಲಯಗಳ ವಿವರ.

ಈ ಕಾರ್ಯಾಲಯದಲ್ಲಿ ಯಾವುದೇ ಗ್ರಂಥಾಲಯ, ವಾಚನಾಲಯಗಳು ಸಾರ್ವಜನಿಕರಿಗೆ ಲಭ್ಯವಿರುವುದಿಲ್ಲ. ಸಾರ್ವಜನಿಕರಿಗೆ ಅವಶ್ಯವಿರುವ ಮಾಹಿತಿಯನ್ನು ಕಾರ್ಯಾಲಯದ ಕೆಲಸದ ವೇಳೆಯಲ್ಲಿ ಪ್ರಥಮ ದರ್ಜೆ ಸಹಾಯಕರನ್ನು ಅಥವಾ ಸ್ವಂತ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರನ್ನು ಭೇಟಿಯಾಗಿ ಅಥವಾ ಅರ್ಜಿ ನೀಡಿ ಪಡೆಯಬಹುದಾಗಿದೆ. ಸಾರ್ವಜನಿಕ ವಿಚಾರಣೆಗಾಗಿ ಸಂಪರ್ಕಿಸಬೇಕಾದ ಈ ಕಾರ್ಯಾಲಯದ ದೂರವಾಣಿ ಸಂಖ್ಯೆ: 08384–226143.

**ಕೈಪಿಡಿ–13**

ಈ ಉಪ ವಿಭಾಗದಲ್ಲಿನ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹಾಗೂ ಮೇಲ್ಮನವಿ ಪ್ರಾಧಿಕಾರದ ಹೆಸರು, ಪದನಾಮ, ವಿಳಾಸ ದೂರವಾಣಿ ಸಂಖ್ಯೆ ಇತ್ಯಾದಿ ವಿವರಗಳು.

| ಅ. ನಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್–5(1) | ಸಾರ್ವಜನಿಕರು ಮಾಹಿತಿ ನೀಡುವ ಅಧಿಕಾರಿ ಸೆಕ್ಷನ್–5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್– 19(1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರವರ ಕಛೇರಿ, ಪಂಚಾಯತ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಪಂಚಾಯತ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.(ಉ.ಕ.) | ಪ್ರ.ದ.ಸ. | ಅಧ್ಯಕ್ಷರು, ತಾಲೂಕಾ ಪಂಚಾಯತ್, ಶಿರಸಿ. |

ಶ್ರೀ ಕೆ.ಜಿ. ಹಿರೇಮಠ
ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು,
ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಶಿರಸಿ.

ಪಿ.ಆರ್.645

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–44/08–09, ದಿನಾಂಕ:23ನೇ ಜನವರಿ, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿಕಾರಿಪುರ.
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** : ಪತ್ತೆಯಾಗಿಲ್ಲ

**ಭಾದ್ಯತೆದಾರರು** : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ: 25–02–2009ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸೊರಬ ತಾಲ್ಲೂಕು ಉಳುವಿ ಹೋಬಳಿ ತಳೇಬೈಲು ಗ್ರಾಮದ ಶಿರಾಳಕೊಪ್ಪ–ಉಳುವಿ ರಸ್ತೆಯ ತಳೇಬೈಲು ಕ್ರಾಸ್‌ನಲ್ಲಿ ಕಾಯುತ್ತಿರುವಾಗ ಒಂದು ವಾಹನ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚಿಸಿದಾಗ ವಾಹನವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ವಾಹನದಲ್ಲಿದ್ದ ಅಸಾಮಿಗಳು ವಾಹನದಿಂದ ಇಳಿದು ಕತ್ತಲೆಯಲ್ಲಿ ಕೈಗೆ ಸಿಗದೆ ಪರಾರಿಯಾದರು. ಯಾರನ್ನೂ ಗುರುತಿಸಲು ಸಾಧ್ಯವಾಗಿರುವುದಿಲ್ಲ. ನಂತರ ವಾಹನವನ್ನು ಪರಿಶೀಲಿಸಲಾಗಿ ಬಿಳಿ ಬಣ್ಣದ ಮಾರುತಿ ಓಮಿನಿ ನೊಂದಣಿ ಸಂಖ್ಯೆ: ಜಿಎ–02–ಎ–4482, ಛಾಸ್ಸಿಸ್ ನಂ: ST-91-IN-925053, ಇಂಜಿನ್ ನಂ: 129874 ಆಗಿದ್ದು, ಈ ವಾಹನದೊಳಗೆ ಸಾಗುವಾನಿ ನಾಟಾ 05=0.243ಎಂ3 ಪ್ರಮಾಣವಿದ್ದು, ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಸಾಗುವಾನಿ ನಾಟಾಗಳನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) ರಿಂದ (ಜಿ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅರಣ್ಯ ಸಂಚಾರಿ ದಳ, ಶಿಕಾರಿಪುರದ ಅರಣ್ಯ ಮೊಕದ್ದಮೆ ಸಂಖ್ಯೆ: 84/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 25–02–2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ದಿ: 17–03–2009ರಂದು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ದಿ ಡೈರೆಕ್ಟರ್ ಆಫ್ ಟ್ರಾನ್ಸ್‌ಪೋರ್ಟ್ ಕಮಿಷನರ್, ಪಣಜಿ, ಗೋವಾ ಇವರನ್ನು ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:44/08–09 ದಿ:26–02–2009ರ ಮೂಲಕ ಕೋರಲಾಗಿತ್ತು. ಆದರೆ ಅವರು ಯಾವುದೇ ಮಾಹಿತಿಯನ್ನು ಇಲ್ಲಿಯವರೆವಿಗೂ ಈ ನ್ಯಾಯಾಲಯಕ್ಕೆ ಒದಗಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಈ ವಾಹನದ ಆರ್.ಸಿ. ಮಾಲಿಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ನೋಟಿಸ್ ಜಾರಿಮಾಡಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ:ಸಿಆರ್–41/08–09 ದಿ:06–03–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:29–03–2009ರಂದು ಉದಯವಾಣಿ ದಿನಪತ್ರಿಕೆಯಲ್ಲಿ, ದಿ:24–03–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ, ಮತ್ತು ದಿ:26–03–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:16–01–2010 ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ ನಾಟಾಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನಗಳ ಸಮೇತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಬಿಳಿ ಬಣ್ಣದ ಮಾರುತಿ ಓಮಿನಿ ನೊಂದಣಿ ಸಂಖ್ಯೆ: ಜಿಎ–02–ಎ–4482 (ಛಾಸ್ಸಿಸ್ ನಂ: ST-91-IN-925053, ಇಂಜಿನ್ ನಂ: 129874) ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 05=0.243ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:23–01–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.241

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ–41/08–09, ದಿನಾಂಕ:23ನೇ ಜನವರಿ, 2010**

| | | |
|---|---|---|
| **ಉಪಸ್ಥಿತರು** | : | ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,<br>ಅಧಿಕೃತ ಅಧಿಕಾರಿ ಹಾಗೂ<br>ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ. |
| **ಫಿರ್ಯಾಧಿದಾರರು** | : | ವಲಯ ಅರಣ್ಯಾಧಿಕಾರಿ,<br>ಸಾಗರ ವಲಯ, ಸಾಗರ.<br>(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ) |
| **ಆರೋಪಿಗಳು** | : | (1) ಬಸವರಾಜ್ (2) ಮುದ್ದು |
| **ಭಾಧ್ಯತೆದಾರರು** | : | ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ. |

**ಪ್ರಸ್ತಾವನೆ:**

ಶಿರಾಳಕೊಪ್ಪ ವಲಯದ ನಗರ ತನಿಖಾ ವನಪಾಲಕ ಮತ್ತು ಸಿಬ್ಬಂದಿಯವರು ಶಿಕಾರಿಪುರ ತಾಲ್ಲೂಕು ಶಿರಾಳಕೊಪ್ಪ ಟೌನ್ ಶಿಕಾರಿಪುರದಿಂದ ಶಿರಾಳಕೊಪ್ಪಕ್ಕೆ ಹೋಗುವ ರಸ್ತೆಯಲ್ಲಿ ರಾತ್ರಿ ಗಸ್ತು ತಿರುಗುತ್ತಿರುವಾಗ ದಿ: 06–02–2009ರ ಬೆಳಗಿನ ಜಾವ 5–30ರ ಸಮಯದಲ್ಲಿ ಶಿಕಾರಿಪುರದ ಕಡೆಯಿಂದ ಒಂದು ವಾಹನ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ 100 ಅಡಿ ದೂರದಲ್ಲಿ ವಾಹನ ನಿಲ್ಲಿಸಿ ವಾಹನದಲ್ಲಿದ್ದ ಅಸಾಮಿಗಳು ಓಡಲು ಪ್ರಾರಂಭಿಸಿದಾಗ ಇಲಾಖೆಯವರು ಬೆನ್ನಟ್ಟಿದರೂ ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಲಾಗಿ ಮಾರುತಿ ವ್ಯಾನ್ ಕೆಎ–18–ಎಂ–4826, ಛಾಸ್ಸಿಸ್ ನಂಬರ್ 369005 ಮತ್ತು ಇಂಜಿನ್ ನಂಬರ್ 1962751 ಆಗಿದ್ದು, ವಾಹನದೊಳಗಡೆ 4 ಬೀಟೆ ನಾಟಾವಿದ್ದು, ಅದರ ಅಳತೆ 0.657 ಎಂ3 ಇದ್ದು, ಈ ನಾಟಾಗಳಿಗೆ ಇಲಾಖಾ ಛಾಪಾದ ಗುರುತಿಲ್ಲ ಮತ್ತು ಹಸಿ ನಾಟಾಗಳಾಗಿದ್ದು, ಇವುಗಳನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನದ ಮೇಲೆ ಬರೆದ ಮೊಬೈಲ್ ನಂ: 9880607480ಕ್ಕೆ ಫೋನ್ ಮಾಡಿ ಸ್ಥಳಕ್ಕೆ ಕರೆಸಲಾಗಿ, ಅವರ ಹೆಸರು ಬಸವರಾಜಪ್ಪ ಬಿನ್ ಮುರುಗೆಪ್ಪ, ಕಣಸೋಗೇರ, 38 ವರ್ಷ, ಕವಲಿ ಗ್ರಾಮ, ಶಿಕಾರಿಪುರ ತಾ॥ ಎಂಬುದಾಗಿ ಮತ್ತು ಈ ವಾಹನ ಅವರದ್ದೆಂದು, ಡ್ರೈವರ್ ಮೂಲಕ ಬಾಡಿಗೆರೆ ಕಳುಹಿಸಿದದೆಂದು, ಚಾಲಕನ ಹೆಸರು ಮುದ್ದು ಎಂದು, ಅವನ ತಂದೆ ಹೆಸರು ಗೊತ್ತಿಲ್ಲವೆಂದು ತಿಳಿಸಿದರು. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಬೀಟೆ ನಾಟಾಗಳನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 163, 165ರ ಪ್ರಕಾರ ಶಿರಾಳಕೊಪ್ಪ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 56/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 09–02–2009ರಂದು ಆದೇಶವಾಗಿದೆ.

ಈ ಪ್ರಕರಣದ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ಇವರು ದಿ:13–01–2010ರಂದು ಈ ನ್ಯಾಯಾಲಯಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿ, ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪತ್ರ ಸಲ್ಲಿಸಲು ಮತ್ತು ವಾಹನ, ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–41/08–09 ದಿ:10–02–2009 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ಕೋರಲಾಗಿತ್ತು. ಹಾಗೂ ಪ್ರತಿಯನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೂ ಕಳುಹಿಸಿದೆ. ಈ ವಾಹನದ ಬಿ ಪ್ರತಿಯನ್ನು ಸಾರಿಗೆ ಅಧಿಕಾರಿ, ಸಾಗರ ಇವರು ಈ ನ್ಯಾಯಾಲಯಕ್ಕೆ ದಿ: 01–04–2009ರಂದು ಸಲ್ಲಿಸಿರುತ್ತಾರೆ. ಸದರಿ ಬಿ ಪ್ರತಿಯಲ್ಲಿ ನಮೂದಿಸಿದ ಆರ್.ಸಿ. ಮಾಲಿಕರಾದ ಶ್ರೀ ಬಸವರಾಜ್ ಬಿನ್ ಮುರುಗಪ್ಪ, ಮನೆ ನಂ: 35, ಕವಲಿ, ತೊಗರ್ಸಿ, ಶಿಕಾರಿಪುರ ತಾಲ್ಲೂಕು ಇವರ ಹೆಸರಿಗೆ ದಿ:30–03–2007ರಂದು ಮಾಲಿಕತ್ವ ವರ್ಗಾಯಿಸಿರುತ್ತದೆಂದು

ತಿಳಿಸಿರುತ್ತಾರೆ. ಇವರಿಗೆ ದಿ: 17–04–2009ರಂದು ನೋಟಿಸನ್ನು 30 ದಿನಗಳ ಕಾಲಾವಕಾಶ ನೀಡಿ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ರವರ ಮೂಲಕ ಜಾರಿ ಮಾಡಿದೆ. ಆರ್.ಸಿ. ಮಾಲಿಕರಿಗೆ ಜಾರಿಮಾಡಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ರವರ ಕಛೇರಿ ಅರಣ್ಯ ಮೊಕದ್ದಮೆ ಸಂಖ್ಯೆ: 77/09–10 ದಿ:02–05–2009ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇಲ್ಲಿಯವರೆವಿಗೂ ವಾಹನ ಮಾಲಿಕರು ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ:ಸಿಆರ್–41/08–09 ದಿ:06–03–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:29–03–2009ರಂದು ಉದಯವಾಣಿ ದಿನಪತ್ರಿಕೆಯಲ್ಲಿ, ದಿ:24–03–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ, ಮತ್ತು ದಿ:26–03–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 16–01–2010 ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಶಿರಾಳಕೊಪ್ಪ ವಲಯ ಇವರು ಇಲಾಖಾ ಪರ ವಶಪಡಿಸಿಕೊಂಡು, ಅ.ಮೊ.ಸಂಖ್ಯೆ: 56/08–09ನ್ನು ದಾಖಲಿಸಿ ವಾಹನ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ಕಾನೂನು ರೀತ್ಯಾ ಪ್ರಚಾರ ಕಾರ್ಯ ಮುಗಿಸಿದ್ದು, ಡಿಫೆನ್ಸ್ ಕಡೆಯವರು ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿ ಸಲ್ಲಿಸಿಲ್ಲವಾದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಮತ್ತು ಆರ್.ಸಿ. ಮಾಲಿಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ ದಿ: 17–04–2009ರಂದು ನೋಟಿಸು ನೀಡಿದೆ. ಆದರೂ ಸಹ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–18–ಎಂ–4826, (ಛಾಸ್ಸಿಸ್ ನಂಬರ್ 369005 ಮತ್ತು ಇಂಜಿನ್ ನಂಬರ್ 1962751) ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 0.657ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 23–01–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.242

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–42/08–09, ದಿನಾಂಕ:23ನೇ ಜನವರಿ, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಶಿಕಾರಿಪುರ ವಲಯ, ಶಿಕಾರಿಪುರ.
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** : ಪತ್ತೆಯಾಗಿಲ್ಲ

**ಭಾದ್ಯತೆದಾರರು** : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿನಾಂಕ:17–02–2009ರಂದು ಶಿಕಾರಿಪುರ ವಲಯದ ವಲಯ ಅರಣ್ಯಾಧಿಕಾರಿಗಳಿಗೆ ಬಂದ ಖಚಿತ ವರ್ತಮಾನದಂತೆ ಇಲಾಖಾ ವಾಹನದಲ್ಲಿ ಸಿಬ್ಬಂದಿಯೊಂದಿಗೆ ಯರೇಕಟ್ಟೆ ಕ್ರಾಸ್‌ನಲ್ಲಿ ಕಾಯುತ್ತಿರುವಾಗ ಬೆಳಗಿನ ಜಾವ 5–30 ಗಂಟೆಯ ಸಮಯದಲ್ಲಿ ಒಂದು ವಾಹನ ಹೆಡ್‌ಲೈಟ್ ಬೆಳಕಿನೊಂದಿಗೆ ತರಲಘಟ್ಟ ಕಡೆಯಿಂದ ಯರೇಕಟ್ಟೆ ಕ್ರಾಸ್ ಕಡೆ ಬರುತ್ತಿರುವುದನ್ನು ನಿಲ್ಲಿಸಲು ಬ್ಯಾಟರಿ ಬೆಳಕಿನಿಂದ ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ಮುಂದೆ ಹೋದಾಗ ಇಲಾಖಾ ವಾಹನವನ್ನು ಬೆನ್ನಟ್ಟಿ ಶಿಕಾರಿಪುರ ತಾಲ್ಲೂಕು ಅಂಜನಾಪುರ ಹೋಬಳಿ ಯರೇಕಟ್ಟೆ ಗ್ರಾಮಕ್ಕೆ ಹೋಗುವ ಟಾರ್ ರಸ್ತೆಯಲ್ಲಿ ಯರೇಕಟ್ಟೆ ಮನ್ನಾ ಜಂಗ್ಲಿಯ ಪಕ್ಕದಲ್ಲಿರುವ ಗದ್ದೆಗೆ ನುಗ್ಗಿ ನಿಂತಿತು. ವಾಹನದಿಂದ 2 ಜನ ಅಸಾಮಿಗಳು ಇಳಿದು ಕೈಗೆ ಸಿಗದೆ ಪರಾರಿಯಾದರು. ನಂತರ ವಾಹನ ಪರಿಶೀಲಿಸಲಾಗಿ ಟೆಂಪೋ ಟ್ರಾಕ್ಸ್ ಕೆಎ–37–ಎಂ–893, ಇಂಜಿನ್ ನಂ: 09808142021, ಛಾಸ್ಸಿಸ್ ನಂಬರ್: F–55018751–A–02 ಆಗಿದ್ದು, ಈ ವಾಹನದೊಳಗೆ ಸಾಗುವಾನಿ ಸೈಜ್ 40=0.610ಎಂ3, ಬೀಟೆ ಸೈಜ್ 15=0.087ಎಂ3 ಒಟ್ಟು 55=0.697ಎಂ3 ಪ್ರಮಾಣವಿದ್ದು, ಈ ಸೈಜುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಸಾಗುವಾನಿ, ಬೀಟೆ ಸೈಜ್‌ಗಳನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 71(ಎ) ರಿಂದ (ಜಿ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 163, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 81/08–09 ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ದಿ: 18–02–2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ದಿ:23–02–2009ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು 71(ಎ) ಪ್ರಕಾರ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:42/08–09 ದಿ:28–02–2009ರಂದು ಪತ್ರ ಬರೆದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಗಂಗಾವತಿ ಇವರನ್ನು ಕೋರಲಾಗಿತ್ತು. ಪ್ರಾದೇಶಿಕ ಸಾರಿಗೆ ಅಧಿಕಾರಿ, ಕೊಪ್ಪಳದವರ ಪತ್ರ ಸಂಖ್ಯೆ: ಪ್ರಾಸಾಅ:ಕೊ:ನೊಂದಣಿ ವಿಭಾಗ/ 08–09 ದಿ:17–03–2009ರಂದು ಈ ನ್ಯಾಯಾಲಯಕ್ಕೆ ಪತ್ರ ಸಲ್ಲಿಸಿ ಈ ವಾಹನದ ಸಿ.ಸಿ.ಯನ್ನು ದಿ:26–07–2000ರಂದು ಚಿತ್ರದುರ್ಗ ಪ್ರಾದೇಶಿಕ ಕಛೇರಿಗೆ ವರ್ಗಾಯಿಸಿದೆಯೆಂದು ತಿಳಿಸಿರುತ್ತಾರೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿತ್ರದುರ್ಗ ರವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–42/08–09 ದಿ:25–03–2009ರಂದು ಪತ್ರ ಬರೆದು ಬಿ ಪ್ರತಿಯನ್ನು ಒದಗಿಸಲು ಕೋರಿದೆ. ಈ ವಾಹನದ ಸಿ.ಸಿ.ಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿ, ಹಾವೇರಿ ಇವರ ಕಛೇರಿಗೆ ದಿ: 05–08–2000ರಂದು ವರ್ಗಾಯಿಸಿದೆಯೆಂದು, ಅದರಂತೆ ಈ ವಾಹನದ ಸಿ.ಸಿ.ಯನ್ನು ಸಾಗರದ ಪ್ರಾದೇಶಿಕ ಕಛೇರಿಗೆ

ವರ್ಗಾಯಿಸಿದ ಬಗ್ಗೆ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಕೋರಿದಾಗ, ಸಾರಿಗೆ ಅಧಿಕಾರಿ, ಸಾಗರ ಇವರು ಈ ವಾಹನದ ಬಿ ಪ್ರತಿಯನ್ನು ಸಲ್ಲಿಸಿ, ಅದರಲ್ಲಿ ದಿ: 18–08–2008ರಂದು ಪ್ರಾದೇಶಿಕ ಸಾರಿಗೆ ಕಛೇರಿ, ಶಿವಮೊಗ್ಗಕ್ಕೆ ಸಿ.ಸಿ.ಯನ್ನು ವರ್ಗಾಯಿಸಿದೆ ಎಂದು ನಮೂದಿಸಿರುತ್ತಾರೆ. ಈ ಬಗ್ಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–42/08–09 ದಿ: 17–04–2009ರಂದು ಪತ್ರ ಬರೆದು ಈ ವಾಹನದ ಆರ್.ಸಿ. ಮಾಲಿಕರ ಬಗ್ಗೆ ಈ ವಾಹನದ ಬಿ ಪ್ರತಿ ಒದಗಿಸಲು ಕೋರಿದೆ. ಇಲ್ಲಿಯವರೆವಿಗೂ ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿಲ್ಲ. ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಂತರ ಹರಾಜಿನಲ್ಲಿ ವಿಲೇ ಮಾಡಿದ ನಂತರ ಆರ್.ಸಿ. ಮಾಲೀಕರು ನ್ಯಾಯಾಲಯದ ಮೊರೆ ಹೋದಲ್ಲಿ ಅದಕ್ಕೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶಿವಮೊಗ್ಗ ಇವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ:ಸಿಆರ್–41/08–09 ದಿ:06–03–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:29–03–2009ರಂದು ಉದಯವಾಣಿ ದಿನಪತ್ರಿಕೆಯಲ್ಲಿ, ದಿ:24–03–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ, ಮತ್ತು ದಿ:26–03–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:16–01–2010 ರಂದು ವಾದ ಮಂಡಿಸಿ ಈ ವಾಹನದಲ್ಲಿ ಸಾಗುವಾನಿ, ಬೀಟೆ ಸೈಜ್‌ಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನಗಳ ಸಮೇತ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಟೆಂಪೋ ಟ್ರಾಕ್ಸ್ ಕೆಎ–37–ಎಂ–893 (ಇಂಜಿನ್ ನಂ: 09808142021, ಛಾಸ್ಸಿಸ್ ನಂಬರ್: F-55018751-A-02) ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಸೈಜ್ 40=0.610ಎಂ3, ಬೀಟೆ ಸೈಜ್ 15=0.087ಎಂ3 ಒಟ್ಟು 55=0.697ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 23–01–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.243

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–09/08–09, ದಿನಾಂಕ:20ನೇ ಫೆಬ್ರವರಿ, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಆನವಟ್ಟಿ ವಲಯ, ಆನವಟ್ಟಿ.
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಭಾದ್ಯತೆದಾರರು** : ಶ್ರೀ ವೀರಭದ್ರ ಗೌಡ ಬಿನ್ ರುದ್ರಪ್ಪ ಗೌಡ,
ಮನೆ ನಂ: 10, ಸಂತವಳ್ಳಿ,
ಕುಪ್ಪಗಡ್ಡೆ, ಶಿರಸಿ ತಾಲ್ಲೂಕು.
(ಶ್ರೀ ಇ. ನಾಗರಾಜ್, ವಕೀಲರು, ಸಾಗರ)

**ಪ್ರಸ್ತಾವನೆ:**

ದಿ: 02–07–2008ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರು ಸೊರಬ ತಾಲ್ಲೂಕು ಜಡೆ ಶಾಖೆ ಆಲಹಳ್ಳಿ ಗಸ್ತಿನ ಶಾಂತಾಪುರ ಮಠದ ಹತ್ತಿರ ಅರತಲಗದ್ದೆ ಎಂ.ಎಫ್. ಸಾಗುವಾನಿ ನೆಡುತೋಪಿನಲ್ಲಿ ರಾತ್ರಿ ಗಸ್ತು ಮಾಡುತ್ತಿರುವಾಗ ಒಂದು ವಾಹನಕ್ಕೆ ಜನರು ನಾಟಾದ ತುಂಡುಗಳನ್ನು ತುಂಬುತ್ತಿರುವುದು ಕಂಡುಬಂದು, ಇಲಾಖೆಯವರನ್ನು ನೋಡಿ ಕೆಲವರು ಓಡಲು ಪ್ರಾರಂಭಿಸಿದರು. ಅವರಲ್ಲಿ ಇಬ್ಬರನ್ನು ಬೆನ್ನಟ್ಟಿ ಹಿಡಿಯಲಾಯಿತು. ವಾಹನ ಟಾಟಾ 207–DIEX ನೊಂದಣಿ ಸಂಖ್ಯೆ: KA-15-TC-002 ಎಂದು, ಛಾಸ್ಸಿಸ್ ನಂ: 374463-CSZ 917640, ಇಂಜಿನ್ ನಂ: CSZ-837313 ಆಗಿದ್ದು, ವಾಹನದೊಳಗಡೆ ಸಾಗುವಾನಿ ನಾಟಾ 6=0.253 ಎಂ3 ಇದ್ದು, ಈ ತುಂಡುಗಳ ತುದಿ, ಬುಡದಲ್ಲಿ ಯಾವುದೇ ಛಾಪಾದ ಗುರುತಿರಲಿಲ್ಲ. ಮತ್ತು ಸಿಕ್ಕಿಬಿದ್ದ ಅಸಾಮಿಗಳಾದ (1) ಮಂಜಪ್ಪ ಹನುಮಯ್ಯ, ಈಳಿಗೆರೆ, 35 ವರ್ಷ, ಚಿಕ್ಕಾಂಶಿ ಹೊಸೂರು, ಹಾನಗಲ್ ತಾಲ್ಲೂಕು, (2) ಹುಸೇನ್ ಮಿಯಾ ಮದರ್ ಸಾಬ್, 32 ವರ್ಷ, ಚಿಕ್ಕಾಂಶಿ ಹೊಸೂರು, ಹಾನಗಲ್ ತಾಲ್ಲೂಕು ಇವರು ರಹದಾರಿ ಇಲ್ಲವೆಂದು, ಓಡಿಹೋದವನನ್ನು ವೀರಭದ್ರ ರುದ್ರೇಗೌಡ ಸಂತೊಳ್ಳಿ, ಶಿರಸಿ ತಾಲ್ಲೂಕು ಎಂದು ತಿಳಿಸಿರುತ್ತಾರೆ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ವಾಹನ, ಅರಣ್ಯ ಉತ್ಪನ್ನ ಮತ್ತು ಅಸಾಮಿಗಳನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಅರಣ್ಯ ಮೊಕದ್ದಮೆ ಸಂಖ್ಯೆ: 30/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:03–07–2008ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯದ ಪತ್ರ ಸಂಖ್ಯೆ: 527/08–09 ದಿ:01–10–2008ರಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಕೋರಿರುತ್ತಾರೆ.

ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–09/08–09 ದಿ:14–07–2008 ರಂದು ಪತ್ರ ಬರೆದು ಕೋರಲಾಗಿತ್ತು. ಅದರಂತೆ ಈ ವಾಹನದ ಬಿ ಪ್ರತಿಯನ್ನು ಸಾರಿಗೆ ಅಧಿಕಾರಿ, ಸಾಗರ ಇವರು ಪತ್ರ ಸಂಖ್ಯೆ: ಪ್ರಾಸಾಅ:ಸಾಗರ:ತಾನೊ/08–09ನ್ನು ದಿ: 26–09–2008ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ಆರ್.ಸಿ. ಮಾಲೀಕರಾದ ಶ್ರೀ ವೀರಭದ್ರ ಗೌಡ ಬಿನ್ ರುದ್ರಪ್ಪ ಗೌಡ, ಮನೆ ನಂ: 10, ಸಂತವಳ್ಳಿ, ಕುಪ್ಪಗಡ್ಡೆ, ಶಿರಸಿ ತಾಲ್ಲೂಕು ಎಂದಿದ್ದು, ಛಾಸ್ಸಿಸ್ ನಂಬರ್ ಮತ್ತು ಇಂಜಿನ್ ನಂಬರ್ ತಾಳೆಯಾಗಿದ್ದು, ವಾಹನದ ತಾತ್ಕಾಲಿಕ ನೊಂದಣಿ ಸಂಖ್ಯೆ: ಕೆಎ–15–ಟಿಆರ್–303–07–08 ಎಂದಿದೆ. ಆರ್.ಸಿ. ಮಾಲಿಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1)ರ ಪ್ರಕಾರ 30 ದಿನಗಳ ಕಾಲಾವಕಾಶ ನೀಡಿ ನೋಟಿಸನ್ನು ಜಾರಿಮಾಡಿದೆ. ದಿ: 22–10–2008ರಂದು ನೊಂದಣಿ ಅಂಚೆ ಮೂಲಕ ಜಾರಿಮಾಡಿದ ಲಕೋಟೆ ಮೇಲೆ ಅಂಚೆ

ಇಲಾಖೆಯವರು ದಿ:03–11–08ರಂದು "ಸದರಿ ವಿಳಾಸದವರ ಮನೆಯಲ್ಲಿ ಈ ದಿನ ತಿಳಿಸಲಾಗಿ ಸದರಿಯವರು ರಿಸೀವ್ ಮಾಡಿಕೊಂಡಿರುವುದಿಲ್ಲ, ಕಾರಣ ಸೆಂಡರ್‌ಗೆ ರವಾನೆ" ಎಂದು ನಮೂದಿಸಿ ಲಕೋಟೆ ಹಿಂದಿರುಗಿಸಿರುತ್ತಾರೆ.

ಈ ವಾಹನದ ಆರ್.ಸಿ. ಮಾಲೀಕರು ವಕೀಲರ ಮುಖಾಂತರ ಕ್ಲೈಮ್ ಅರ್ಜಿಯನ್ನು ದಿ:03–10–2008ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿದ ಅರ್ಜಿಯನ್ನು ದಿ:31–01–2009ರಂದು ತಿರಸ್ಕರಿಸಿ ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಟಿ.ಆರ್. ಹಿತ್ತಲಮನಿ, ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರನ್ನು ದಿ:25–04–2009 ರಂದು ಕರೆಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ದಿ: 02–07–2008ರಂದು ನಾನು ನನ್ನ ಸಿಬ್ಬಂದಿಗಳಾದ ಬಸವರಾಜ್, ಅರಣ್ಯ ರಕ್ಷಕ, ವನಪಾಲಕ ಹುಚ್ಚಪ್ಪ, ಇತರೆ ಸಿಬ್ಬಂದಿಗಳೊಂದಿಗೆ ತಲಗದ್ದೆ ಕಾಡಿನಲ್ಲಿ ಗಸ್ತು ಮಾಡುತ್ತಿರುವಾಗ ಬೆಳಗಿನ ಜಾವ 4–30ರ ಸಮಯದಲ್ಲಿ ಶಾಂತಪುರ ಮಠ ರಸ್ತೆಯಲ್ಲಿ ಬರುತ್ತಿರುವಾಗ ಸಾಗುವಾನಿ ನೆಡುತೋಪಿನಲ್ಲಿ ಒಂದು ವಾಹನ ನಿಂತಿರುವುದು ಕಂಡುಬಂದಿತು. ನಮ್ಮ ವಾಹನದ ಬೆಳಕು ಮತ್ತು ಬ್ಯಾಟರಿ ಬೆಳಕನ್ನು ನೋಡಿ ಅಸಾಮಿಗಳು ಓಡಿಹೋಗಲು ಪ್ರಯತ್ನಿಸಿದರು. ಇಬ್ಬರು ಸಿಕ್ಕಿದ್ದು, ಉಳಿದವರು ಓಡಿಹೋದರು. ಹಿಡಿದವರಲ್ಲಿ ಒಬ್ಬನು ಮಂಜಪ್ಪ ಬಿನ್ ಹನುಮಯ್ಯ ಮತ್ತೊಬ್ಬ ಹುಸೇನ್ ಮಿಯಾ ಸಾಬ್ ಎಂದು ತಿಳಿಸಿದರು. ವಾಹನ ಬಿಳಿ ಬಣ್ಣದ ಟಾಟಾ ಡಿಐಎಕ್ಸ್ ನಂ: ಕೆಎ–15–ಟಿಸಿ–002 ಎಂದು ಇದ್ದು, ಸದರಿ ವಾಹನದಲ್ಲಿ ಸಹಿಯಾದ ಸಾಗುವಾನಿ ಜಾತಿಯ 0.253 ಎಂ3 ತುಂಡುಗಳಿದ್ದು, ಅವುಗಳನ್ನು ಸಾಗಿಸಲು ರಹದಾರಿ ಇಲ್ಲದೇ ಇರುವುದರಿಂದ ಅವುಗಳ ಮೇಲೆ ಇಲಾಖಾ ಛಾಪಾ ಹಾಕಿ, ಹಳದಿ ಬಣ್ಣದಿಂದ ನಂಬರ್ ಕೊಟ್ಟು ಅವುಗಳನ್ನು ಮತ್ತು ವಾಹನವನ್ನು ಅಮಾನತ್ತು ಪಡಿಸಿಕೊಂಡು ಮಹಜರ್ ಬರೆಯಲಾಯಿತು. ನಂತರ ಆರೋಪಿಗಳು, ಮಾಲು, ವಾಹನದೊಂದಿಗೆ ಕಛೇರಿಗೆ ಬಂದು ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರ್ಪಡಿಸಿ ಮುಂದಿನ ವಿಚಾರಣೆಯನ್ನು ಎನ್. ಹುಚ್ಚಪ್ಪ, ವನಪಾಲಕ ಇವರಿಗೆ ವಹಿಸಿರುತ್ತೇನೆ. ಆ ದಿನ ನಾವು ಮಾಡಿದ ಮಹಜರನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ ಪಿ–1 ಎಂತಲೂ, ನನ್ನ ಸಹಿಯನ್ನು ನಿಪಿ–1ಎ ಎಂತಲೂ, ವನಪಾಲಕರು ದಾಖಲಿಸಿದ ಪ್ರಥಮ ವರ್ತಮಾನ ವರದಿ, ಜಪ್ತು ವರದಿಯನ್ನು ನಿಪಿ–2 ಮತ್ತು ನಿಪಿ–3 ಎಂದು ಗುರುತಿಸಲಾಯಿತು. ಸದರಿ ವಾಹನವನ್ನು ಅಕ್ರಮ ಸಾಗುವಾನಿ ನಾಟಾ ಸಾಗಿಸಲು ಉಪಯೋಗಿಸಿರುವುದರಿಂದ ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ"

ಪಾಟಿ ಸವಾಲಿಗೆ ದಿ: 20–06–2009, 01–08–2009ರಂದು ಕಾಲಾವಕಾಶ ನೀಡಿದೆ. ಆ ದಿನಗಳಲ್ಲಿ ಪಾಟಿ ಸವಾಲಿಗೆ ನಿಗದಿಪಡಿಸಿದ ನೋಟಿಸ್ ತಿಳುವಳಿಕೆ ಇದ್ದರೂ ಡಿಫೆನ್ಸ್ ಕಡೆಯವರು ಗೈರು ಹಾಜರಾಗಿರುತ್ತಾರೆ.

ಡಿ.ಸಾ. ವಿಚಾರಣೆ – ದಿ: 03–10–2009, 19–12–2009ರಂದು 2 ದಿನ ಕಾಲಾವಕಾಶ ನೀಡಿದೆ. ಸದರಿ 03–10–09 ರಂದು ಡಿಫೆನ್ಸ್ ಕಡೆಯ ವಕೀಲರು ಹಾಜರಿದ್ದು, ಮುಂದಿನ ದಿನಾಂಕದಂದು ಡಿಫೆನ್ಸ್ ಸಾಕ್ಷಿ ವಿಚಾರಣೆ ಮಾಡಲು ಸಮಯ ಕೋರಿದಂತೆ ಕಾಲಾವಕಾಶ ನೀಡಿದ್ದರೂ ದಿ: 19–12–2009ರಂದು ಡಿಫೆನ್ಸ್ ಕಡೆ ವಕೀಲರು ಗೈರು ಹಾಜರಾಗಿರುತ್ತಾರೆ. ಡಿಫೆನ್ಸ್ ಕಡೆ ವಾದವನ್ನು ಮಂಡಿಸಲು ದಿ:23–01–2010ರಂದು ವಾದ ಮಂಡಿಸಿ ಕ್ಲೈಮ್ ಅರ್ಜಿಯಲ್ಲಿ ನಮೂದಿಸಿದಂತೆ ಪರಿಗಣಿಸಿ, ವಾಹನ ಬಿಟ್ಟುಕೊಡಲು ಕೋರಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:23–01–2010ರಂದು ವಾದ ಮಂಡಿಸಿ, ದಿ:02–07–2008ರಂದು ಸಾಗುವಾನಿ ನಾಟಾ ಅಕ್ರಮವಾಗಿ ವಾಹನದಲ್ಲಿ ಸಾಗಿಸುತ್ತಿರುವಾಗ ಆರೋಪಿಗಳ ಸಮೇತ ಇಲಾಖಾ ಪರ ವಶಪಡಿಸಿಕೊಂಡು ಕೇಸು ದಾಖಲಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಈ ನ್ಯಾಯಾಲಯಕ್ಕೆ ಸಾಕ್ಷಿಗಳ ಸಹಿಯೊಂದಿಗೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನವನ್ನು ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸಲು ಬಳಸಿರುವುದು ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಆರ್.ಸಿ. ಮಾಲೀಕರು ಹಾಗೂ ಅರ್ಜಿದಾರರು ಟಾಟಾ 207–DIEX ನೊಂದಣಿ ಸಂಖ್ಯೆ: KA-15- TC-002 ರಲ್ಲಿ ದಿ:02–07–2008 ರಂದು ಸಾಗುವಾನಿ ನಾಟಾ 06=0.253ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?

2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ ಟಾಟಾ 207 ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?

4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಹೌದು ಎಂದಾಗಿರುತ್ತದೆ.

**ಅಂಶ–1:**

ದಿನಾಂಕ: 02–07–2008ರಂದು ಆನವಟ್ಟಿ ವಲಯದ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಸೊರಬ ತಾ॥ ಜಡೆ ಹೋಬಳಿ ಅರತಲಗದ್ದೆ ಎಂ.ಎಫ್.ನ ಸಾಗುವಾನಿ ನೆಡುತೋಪಿನಿಂದ ಅಕ್ರಮವಾಗಿ ಸಾಗುವಾನಿಯ ಕಡಿದ ನಾಟಾಗಳನ್ನು ಟಾಟಾ 207ಕ್ಕೆ ತುಂಬಿ ಅಕ್ರಮವಾಗಿ ಸಾಗಿಸುತ್ತಿರುವಾಗ ಪತ್ತೆಹಚ್ಚಿ ಕೇಸು ದಾಖಲಿಸಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಹಾಜರ್ಪಡಿಸಿರುತ್ತಾರೆ. ಸಲ್ಲಿಸಿದ ದಾಖಲೆಗಳಿಗೂ ಮತ್ತು ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ತಾಳೆಯಾಗಿದ್ದು, ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆ ಎಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ವೀರಭದ್ರ ಗೌಡ ಬಿನ್ ರುದ್ರಪ್ಪ ಗೌಡ, ಮನೆ ನಂ: 10, ಸಂತವಳ್ಳಿ, ಕುಪ್ಪಗಡ್ಡೆ, ಶಿರಸಿ ತಾಲ್ಲೂಕು ಇವರು ದಿ:03–10–2008 ರಂದು ಈ ನ್ಯಾಯಾಲಯಕ್ಕೆ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ. ಇವರ ಅರ್ಜಿಯಲ್ಲಿ ಮತ್ತು ಬಿ ಎಕ್ಸ್‌ಟ್ರ್ಯಾಕ್ಟ್‌ನಲ್ಲಿ ನಮೂದಿಸಿದ ವಿಳಾಸದಂತೆ ಆರ್.ಸಿ. ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1) ಪ್ರಕಾರ ಕಾರಣ ಕೇಳಿ ಪತ್ರವನ್ನು ದಿ:22–10–2008 ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿದೆ. ನಂತರ ಆರ್.ಸಿ. ಮಾಲೀಕರು ಈ ವಾಹನವನ್ನು ಮಧ್ಯಂತರ ಸುಪರ್ದಿಗೆ ಬಿಟ್ಟುಕೊಡಲು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯನ್ನು ದಿ:31–01–2009ರಂದು ತಿರಸ್ಕರಿಸಿ ಆದೇಶವಾಗಿದೆ. ಡಿಫೆನ್ಸ್ ಸಾಕ್ಷಿ ಹೇಳಿಕೆಗೆ 2 ಬಾರಿ ದಿನಾಂಕ ನಿಗದಿಪಡಿಸಿದ್ದರೂ ಒಮ್ಮೆಯೂ ವಾಹನ ಮಾಲಿಕರಾಗಲೀ, ಅವರ ಪರ ವಕೀಲರಾಗಲೀ ಈ ಪ್ರಕರಣದ ವಿಚಾರಣೆಗೆ ಹಾಜರಾಗಿರುವುದಿಲ್ಲ. ಡಿಫೆನ್ಸ್ ವಾದವನ್ನು ಮಂಡಿಸಿರುತ್ತಾರೆ. ಇದರಿಂದ ಆರ್.ಸಿ. ಮಾಲೀಕರಿಗೆ ತಮ್ಮ ಅಹವಾಲನ್ನು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿದೆ ಎಂಬುದು ನನ್ನ ಉತ್ತರವಾಗಿದೆ.

**ಅಂಶ–3:**

ದಿ: 02–07–2008ರಂದು ಟಾಟಾ 207ರಲ್ಲಿ ಸಾಗುವಾನಿ ನಾಟಾ 6=0.253ಎಂ3 ನ್ನು ಅಕ್ರಮವಾಗಿ ಸಾಗಿಸುತ್ತಿದ್ದಾಗ ಆನವಟ್ಟಿ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಸಾಕ್ಷಿಗಳ ಸಹಿಯೊಂದಿಗೆ ಸಲ್ಲಿಸಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಆರ್.ಸಿ. ಮಾಲೀಕರು ದಿ:03–10–2008ರಂದು ಸಲ್ಲಿಸಿದ ಅರ್ಜಿಯಲ್ಲಿ ತಿಳಿಸಿದಂತೆ, ಈ ಪ್ರಕರಣದಲ್ಲಿ ಟಾಟಾ 207ರಲ್ಲಿ ಯಾವುದೇ ಅಪರಾಧ ಮಾಡಿಲ್ಲವೆನ್ನುವುದಕ್ಕಾಗಲೀ, ಈ ವಾಹನದಿಂದ ಕಾನೂನು ಬದ್ದವಾಗಿ ಬಾಡಿಗೆ ಹೊಡೆಯುತ್ತಿದ್ದರೆಂಬುದಕ್ಕಾಗಲೀ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಯಾರೂ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ

ಮಾಡದಂತೆ ಆರ್.ಸಿ. ಮಾಲೀಕರಾಗಲೀ, ಅವರ ಪರ ವಾಹನ ಚಾಲಕರಾಗಲೀ ಮುನ್ನೆಚ್ಚರಿಕೆ ಕ್ರಮ ಕೈಗೊಂಡಿರುವುದಿಲ್ಲ ಎಂಬುದು ನನ್ನ ಉತ್ತರವಾಗಿದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಜಪ್ತು ಮಾಡಿದ ವಾಹನ ಟಾಟಾ 207-DIEX ನೊಂದಣಿ ಸಂಖ್ಯೆ: KA-15-TC-002 (ಕೆಎ–15–ಟಿಆರ್–303–07–08) ರಲ್ಲಿ ಮತ್ತು ಈ ವಾಹನದಲ್ಲಿ ಕರ್ನಾಟಕ ಸರ್ಕಾರದ ಸಂಪತ್ತು ಆದ ಸಾಗುವಾನಿ ನಾಟಾ 6=0.253 ಎಂ3 ನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುತ್ತಾರೆ. ಆದ್ದರಿಂದ ಟಾಟಾ 207- DIEX ನೊಂದಣಿ ಸಂಖ್ಯೆ: KA-15-TC-002 (ಕೆಎ–15–ಟಿಆರ್–303–07–08) ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 6=0.253 ಎಂ3 ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ: 20–02–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್.421 ಉಪ ಅರಣ್ಯ ಸಂರಕ್ಷಣಾಧಿಕಾರಿ,

ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3:ಅಮೊ:ವಾಹನ–06/09–10, ದಿನಾಂಕ:6ನೇ ಮಾರ್ಚ್, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಣ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಆನಂದಪುರಂ ವಲಯ, ಚೋರಡಿ
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** : 1) ರಾಜಶೇಖರ 2)ಸತೀಶ

**ಭಾದ್ಯತೆದಾರರು** : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:25–06–2009 ರಂದು ಆನಂದಪುರಂ ವಲಯದ, ಚೋರಡಿಯ ಗೌತಮಪುರ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆನಂದಪುರಂ ಹೋಬಳಿ ಮಲ್ಲಂದೂರು ಗ್ರಾಮದ ಶಿಕಾರಿಪುರದಿಂದ ಆನಂದಪುರಕ್ಕೆ ಹೋಗುವ ರಸ್ತೆಯ ಮಾಸ್ತಿಕಲ್ಲು ಬಳಿ ಕಾಯುತ್ತಿರುವಾಗ ಬೆಳಗಿನ ಜಾವ ಒಂದು ಗೂಡ್ಸ್ ಆಟೋ ಕೆಎ–31–4088 ಬರುತ್ತಿರುವುದನ್ನು ನಿಲ್ಲಿಸಲು ಸೂಚನೆ ಕೊಟ್ಟರು ನಿಲ್ಲಿಸದೆ ಮುಂದೆ ವೇಗವಾಗಿ ಹೋದಾಗ ಅದನ್ನು ಬೆನ್ನಟ್ಟಿ ಗಾಳಿಯಲ್ಲಿ ಗುಂಡು ಹಾರಿಸಿದಾಗ ವಾಹನವನ್ನು ಅಲ್ಲೇ ಬಿಟ್ಟು ಆಸಾಮಿಗಳು ಓಡಲು ಪ್ರಾರಂಭಿಸಿದರು ಅವರನ್ನು ಬೆನ್ನಟ್ಟಿದರು ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ಇಬ್ಬರು ಆಸಾಮಿಗಳನ್ನು ಗುರುತು ಹಿಡಿದಿದ್ದು (1) ರಾಜಶೇಖರ ಬಿನ್ ಹಕ್ಲುಮನೆ ಹುಚ್ಚಪ್ಪ ಅ.ವ. 25 ವರ್ಷ ಹೊಸಕೊಪ್ಪ ವಾಸಿ ಸಾಗರ ತಾ|| (2) ಸತೀಶ್ ಬಿನ್ ಹೊನಗೊಡು ಮಂಜಪ್ಪ, ಅ.ವ 29 ವರ್ಷ ತಳಗೇರಿ ವಾಸಿ, ನರಸೀಪುರ ಗ್ರಾಮ, ಸಾಗರ ತಾ|| ಎಂದು ತಿಳಿಸಿರುತ್ತಾರೆ. ನಂತರ ವಾಹನ ಪರಿಶೀಲಿಸಿದಾಗ

ಲಗೇಜ್ ಕ್ಯಾರಿಯರ್ ಆಟೋ ನಂ: ಜಿಎ–31–4088 ಇಂಜಿನ್ ನಂ: ALMBNB-07256 ಛಾಸ್ಸಿಸ್ ನಂಬರ್: MD-2-ALALZZNWB-05392 ಆಗಿದ್ದು, ಈ ವಾಹನದೊಳಗೆ ಸಾಗಿಸುತ್ತಿದ್ದ 7 ಸಾಗುವಾನಿ ನಾಟಾ 0.386 ಎಂ3 ಪ್ರಮಾಣವಿದ್ದು, ಈ ನಾಟಾಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 33, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯ, ಚೋರಡಿಯ ಅರಣ್ಯ ಮೊಕದ್ದಮೆ ಸಂಖ್ಯೆ:43/09–10ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:26–06–2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಆರೋಪಿಗಳ ವಿರುದ್ದ ನ್ಯಾಯಾಲಯಕ್ಕೆ ಆರೋಪಣಾ ಪಟ್ಟಿ ಸಲ್ಲಿಸಲು ಅನುಮತಿ ಕೋರಿ ಶಿಫಾರಸ್ಸು ಮಾಡಿ ಅನುಮತಿ ಕೋರಿರುತ್ತಾರೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಶಿರಸಿ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:06/09–10 ದಿ:26–06–2009, 20–01–2010ರಂದು ಪತ್ರ ಬರೆದು ಕೋರಲಾಗಿತ್ತು. ಆದರೆ ಅವರಿಂದ ಈ ವಾಹನದ ಬಿ ವರದಿ ಇಲ್ಲಿಯವರೆಗೂ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಿಲೇ ಮಾಡಿದ ನಂತರ ಆರ್.ಸಿ. ಮಾಲೀಕರು ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದರೆ ಅದಕ್ಕೆ ಶಿರಸಿ ಸಾರಿಗೆ ಅಧಿಕಾರಿ/ಸಿಬ್ಬಂದಿಯವರೇ ನೇರ ಹೊಣೆಗಾರರಾಗಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3:ಅಮೊ:ವಾಹನ:ಸಿಆರ್–16/09–10/ದಿ:02–07–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:02–08–2009ರಂದು ಉದಯವಾಣಿ, ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:23–07–2009 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:20–02–2010 ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ವಲಯ

ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಲಗೇಜ್ ಕ್ಯಾರಿಯರ್ ಆಟೋ ನಂ: ಕೆಎ–31–4088 (ಇಂಜಿನ್ ನಂ:ALMBNB-07256 ಛಾಸ್ಸಿಸ್ ನಂಬರ್: MD-2-ALALZZNWB -05392)ನ್ನು ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 7=0.386ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–03–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.463

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–22/09–10, ದಿನಾಂಕ:6ನೇ ಮಾರ್ಚ್, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ಪೋಲಿಸ್ ಸಬ್‌ಇನ್ಸ್‌ಪೆಕ್ಟರ್, ಶಿಕಾರಿಪುರ ಪೋಲಿಸ್ ಠಾಣೆ, ಶಿಕಾರಿಪುರ.
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು,ಸಾಗರ)

**ಆರೋಪಿಗಳು** : 1) ಪ್ರವೀಣ್ ಹೆಚ್.ಎಸ್. 2) ಭೂದೇಶಿ 3) ಪುಟ್ಟಪ್ಪ, 4)ವಿಶ್ವನಾಥ 5) ದಯಾನಂದ

**ಭಾದ್ಯತೆದಾರರು** : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:04–09–2000 ರಂದು ಶಿಕಾರಿಪುರ C.P.I ರವರು ಶಿಕಾರಿಪುರ, P.S.No. 134/2000 ಕಲಂ–394 IPS ಕೇಸಿನಲ್ಲಿ ದಸ್ತಗಿರಿ ಮಾಡಿದ್ದ ಆರೋಪಿ ಪ್ರವೀಣ್ ಹೆಚ್.ಎಸ್. ಬಿನ್ ಶಿವಣ್ಣ, ಚಿತ್ರದುರ್ಗ ಕೊಟ್ಟ ಸ್ವಯಿಚ್ಚೆ ಹೇಳಿಕೆ ಮೇರೆಗೆ ಆರೋಪಿಯು ದಿ:25/26–08–2000ರಂದು ರಾತ್ರಿ ಶಿಕಾರಿಪುರ ನ್ಯಾಯಾಲಯದಲ್ಲಿ ಇತರೆ ಆರೋಪಿಗಳಾದ 1) ಭೂದೇಶಿ 2) ಪುಟ್ಟಪ್ಪ 3) ವಿಶ್ವನಾಥ ಇವರು ಸೇರಿಕೊಂಡು ಶ್ರೀಗಂಧದ ತುಂಡುಗಳನ್ನು ಕಳ್ಳತನ ಮಾಡಿಕೊಂಡು ಮಾರುತಿ ವ್ಯಾನ್‌ನಲ್ಲಿ ಸಾಗಿಸಿಕೊಂಡು ಚೆಕ್ಕೆಗಳನ್ನಾಗಿ ಮಾಡಲು ಭೂದೇಶಿ ಬಿನ್ ಮಲ್ಲೇಗೌಡ, ಇವರ ಮನೆಯಲ್ಲಿಟ್ಟಿರುವ ಶ್ರೀಗಂಧ ಮತ್ತು ಮಾರುತಿ ವ್ಯಾನ್ ತೋರಿಸುತ್ತೇನೆಂದು ಹೇಳಿಕೆ ಮೇರೆಗೆ ಪಂಚರೊಂದಿಗೆ ಕರೆದುಕೊಂಡು ಆರೋಪಿ ಪ್ರವೀಣ್‌ನ ಮಾರ್ಗದರ್ಶನದಂತೆ ಸರ್ಕಾರಿ ಜೀಪಿನಲ್ಲಿ ಮಧ್ಯಾಹ್ನ 3–00 ಗಂಟೆಗೆ ಶಿಕಾರಿಪುರ ಬಿಟ್ಟು ಶಿವಮೊಗ್ಗ ತರೀಕೆರೆ ಕಡೂರು, ಬಾಣಾವರ, ಜಾವಗಲ್. ಬಸವಾನಿಕೋಡಿ ಕ್ರಾಸ್ ಮುಖೇನ ಭಕ್ತಾರಹಳ್ಳಿಗೆ ರಾತ್ರಿ 8–00 ಗಂಟೆಗೆ ಹೋಗಿ ಆರೋಪಿಯು ಮುಂದಾಗಿ ನಡೆದು ದೇವಸ್ಥಾನದ ಮುಂದೆ ಸಾಗಿದಾಗ ಭೂದೇಶಿಯ ಹಂಚಿನ ಮನೆಯ ಬಾಗಿಲು ತೆಗೆದು ನೋಡಿದಾಗ ಅಲ್ಲಿ 3–4 ಜನರು ಸೇರಿಕೊಂಡು ತುಂಡುಗಳನ್ನು ಕೆತ್ತುತ್ತಿದ್ದರು. ಇಲಾಖೆಯವರು ಹಠತ್ತಾಗಿ ಒಳಗೆ ನುಗ್ಗಿ ದಾಳಿಮಾಡಿದಾಗ ಮನೆಯಲ್ಲಿನ 4 ಜನರು ಮನೆ ಹಿಂಭಾಗದಿಂದ ಓಡಿ ಹೋಗಲು ಪ್ರಯತ್ನಿಸಿದರು. ಅರವಲ್ಲಿ ಒಬ್ಬನನ್ನು ಹಿಡಿದಿದ್ದು, ಉಳಿದ 3 ಜನ ಓಡಿಹೋಗಿರುತ್ತಾರೆ. ಆ ಸಮಯದಲ್ಲಿ ಪ್ರವೀಣನು ಓಡಿಹೋದರವನ್ನು ಗುರುತಿಸಿದ್ದು, ಇವರೆ ಆ ದಿನ ಇವನೊಂದಿಗೆ ಶ್ರೀಗಂಧ ಕದಿಯಲು ಬಂದಿದ್ದೆಂದು ಖಚಿತಪಡಿಸಿರುತ್ತಾನೆ. ಸಿಕ್ಕಿಬಿದ್ದವನು ಪುಟ್ಟಪ್ಪ ಬಿನ್ ದೊಡ್ಡಯ್ಯ, 25 ವರ್ಷ ಉಪ್ಪಾರ ಜಾತಿ, ಮಚ್ಚೇರಿ ವಾಸ ಅಂತ ಹೇಳಿದನು. ಓಡಿ ಹೋದವರ ಬಗ್ಗೆ ವಿಚಾರಿಸಿದ್ದು, ಭೂದೇಶಿ, ವಿಶ್ವನಾಥ, ಎಂ.ಎಲ್.ಎ. ಯಾನೇ ದಯಾನಂದ ಅಂತ ತಿಳಿಸಿದನು. ಆ ಮನೆಯನ್ನು ಪರಿಶೀಲಿಸಿ ನೋಡಲಾಗಿ ಶ್ರೀಗಂಧದ ತುಂಡುಗಳಿರುವ ಚೀಲಗಳಿದ್ದು, ಅವುಗಳನ್ನು ಬಿಚ್ಚಿ ನೋಡಿದಾಗ 1ನೇ ಚೀಲದಲ್ಲಿ 73 ಕೆ.ಜಿ. ಶ್ರೀಗಂಧ, 2ನೇ ಚೀಲದಲ್ಲಿ 34 ಕೆ.ಜಿ. 3ನೇ ಚೀಲದಲ್ಲಿ 74 ಕೆ.ಜಿ. 4ನೇ ಚೀಲದಲ್ಲಿ 92 ಕೆ.ಜಿ. 5ನೇ ಚೀಲದಲ್ಲಿ 87 ಕೆ.ಜಿ. 6ನೇ ಚೀಲದಲ್ಲಿ 30 ಕೆ.ಜಿ. ಇದ್ದು, ಅಂದಾಜು ಬೆಲೆ 90,000/–

ಆಗಿದ್ದು, ಸ್ಯಾಂಪಲಗಾಗಿ ಅರ್ಧ ಕೆ.ಜಿ. ಶ್ರೀಗಂಧ ಚೆಕ್ಕೆಗಳನ್ನು ತೆಗೆದಿಟ್ಟು, ಚೀಲದಲ್ಲಿದ್ದ 2 ಕಬ್ಬಿಣದ ಕಂದಲಿಗಳನ್ನು ಅಮಾನತ್ತು ಪಡಿಸಿಕೊಂಡು ಈ ಮನೆಯಿಂದ ಸುಮಾರು 60 ಅಡಿ ದಕ್ಷಿಣಕ್ಕೆ ಗುರಪ್ಪ ಗೌಡ ಬಿನ್ ನಿಂಗೇಗೌಡ, ಇವರ ವಾಸದ ಮನೆಯ ಪೂರ್ವದ ಗೋಡೆಯ ಪಕ್ಕದ ಅಂಗಳದಲ್ಲಿ ಒಂದು ಬಿಳಿ ಬಣ್ಣದ ಮಾರುತಿ ವ್ಯಾನ್ ನಿಂತಿದ್ದು, ಈ ವಾಹನವನ್ನು ಸಿಕ್ಕಿಬಿದ್ದ ಆರೋಪಿಗಳಿಬ್ಬರು ಗುರುತಿಸಿ ಇದೇ ವ್ಯಾನಿನಿಂದ ಇವರು ಶ್ರೀಗಂಧವನ್ನು ಶಿಕಾರಿಪುರದಿಂದ ಭಕ್ತರ ಹಳ್ಳಿಯವರೆಗೆ ಸಾಗಿಸಿದ್ದೆಂದು ಹೇಳಿಕೆ ಹೇಳಿದ ಮೇರೆಗೆ ಈ ವಾಹನವನ್ನು ಪಂಚರ ಸಮಕ್ಷಮ ಅಮಾನತ್ತು ಪಡಿಸಿ ನೋಡಿದಾಗ ಮುಂಭಾಗದ ಹಿಂಭಾಗದಲ್ಲಿ ನಂಬರ್ ಪ್ಲೇಟ್ ಇರುವುದಿಲ್ಲ. ಹಿಂಭಾಗದ ಸೀಟ್ ಇರುವುದಿಲ್ಲ. ಅಲ್ಲಲ್ಲಿ ಶ್ರೀಗಂಧದ ಚಕ್ಕೆಗಳು ವಾಹನದಲ್ಲಿದ್ದು, ನಂತರ ವಾಹನ ಪರಿಶೀಲಿಸಿದಾಗ ಮಾರುತಿ ವ್ಯಾನ್ ನಂಬರ್ ಇರುವುದಿಲ್ಲ. ಇದರ ಇಂಜಿನ್ ನಂ:11976, ಛಾಸ್ಸಿಸ್ ನಂಬರ್:ST-91-IN-727475 ಅಂತಾ ಇರುತ್ತದೆ. ಇದೇ ವಾಹನದಲ್ಲಿ ಕಳವು ಮಾಡಿದ ಶ್ರೀಗಂಧವನ್ನು ಇಲ್ಲಿಯವರೆಗೂ ಸಾಗಿಸಿಕೊಂಡು ಬಂದಿದ್ದೆ ಎಂತಾ ಆರೋಪಿಗಳು ಖಚಿತ ಪಡಿಸಿದ್ದರಿಂದ ಈ ವಾಹನವು ಈ ಕೇಸಿನ ಮುಂದಿನ ತನಿಖೆಗೆ ಅವಶ್ಯಕತೆ ಇದ್ದುದರಿಂದ ಅಮಾನತ್ತು ಪಡಿಸಿರುತ್ತಾರೆ. ನಂತರ ವಾಹನವನ್ನು ಈ ಕಛೇರಿಗೆ ಪಡೆಯಲು ಮತ್ತು ಕಾನೂನು ರೀತ್ಯಾ ವಿಲೇ ಮಾಡಲು ಪ್ರಿನ್ಸಿಪಲ್ ಸೆಷನ್ ಜಡ್ಜ್, ಶಿವಮೊಗ್ಗ ನ್ಯಾಯಾಲಯದಿಂದ ದಿ:24–08–2009 ರಂದು ಆದೇಶವಾದಂತೆ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಈ ವಾಹನವನ್ನು ಶಿವಮೊಗ್ಗ ನ್ಯಾಯಾಲಯದಿಂದ ಪಡೆದು ದಿ:22–09–2009 ರಂದು ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:23–09–2009 ರಂದು ಆದೇಶವಾಗಿದೆ.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3: ಅಮೊ: ವಾಹನ:ಸಿಆರ್–37/09–10 ದಿ:05–12–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:18–12–2009ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:31–12–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:20–02–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನದ ಸಮೇತ ಸಬ್‌ಇನ್ಸ್‌ಪೆಕ್ಟರ್ ಆಫ್ ಪೋಲಿಸ್, ಶಿಕಾರಿಪುರ ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗಿನ ತಿದ್ದುಪಡಿ ಕಾಯಿದೆ ಪ್ರಕಾರ ಸಬ್‌ಇನ್ಸ್‌ಪೆಕ್ಟರ್ ಆಫ್ ಪೋಲಿಸ್, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಮಾರುತಿ ಓಮ್ನಿ ನಂಬರ್ ಕಾಣಿಸುತ್ತಿಲ್ಲ. (ಇಂಜಿನ್ ನಂ:11976, ಛಾಸ್ಸಿಸ್ ನಂಬರ್: ST-91-IN-727475) ನ್ನು ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ಚೆಕ್ಕೆಗಳ ಒಟ್ಟು ತೂಕ 392 ಕೆ.ಜಿ. 500 ಗ್ರಾಂಗಳು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು

ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–03–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್.464 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–47/08–09, ದಿನಾಂಕ:6ನೇ ಮಾರ್ಚ್, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಅಂಬ್ಲಿಗೊಳ ವಲಯ,
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** : ಯಾರು ಪತ್ತೆಯಾಗಿಲ್ಲ.

**ಭಾಧ್ಯತೆದಾರರು** : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:25–03–2009ರಂದು ಅಂಬ್ಲಿಗೊಳ ವಲಯದ, ಸಾಲೂರು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಮೋಟಾರ್ ಬೈಕ್‌ಗಳ ಮೇಲೆ ನಾಟಾ ಸಾಗಿಸುತ್ತಿದ್ದಾರೆಂದು ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ॥ ಕಸಬಾ ಹೋಬಳಿ ಮಲ್ಲಪುರ ಗ್ರಾಮದಿಂದ ಚುಂಚನಕೊಪ್ಪ ಗ್ರಾಮಕ್ಕೆ ಹೋಗುವ ಹಿರೇಕಲವತ್ತಿ ಗ್ರಾಮದ ಕ್ರಾಸ್‌ನ ಆಲದ ಮರದ ಹತ್ತಿರ ಕಾಯುತ್ತಿರುವಾಗ ಮಲ್ಲಾಪುರ ಕಡೆಯಿಂದ ಎರಡು ಬೈಕ್ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ಒಂದು ಬೈಕಿನ ಚಾಲಕನು ಇಲಾಖೆಯವರನ್ನು ನೋಡಿ ಬೈಕ್‌ನ್ನು ಸ್ಥಳದಲ್ಲೇ ಬಿಟ್ಟು ಓಡುತ್ತಿರುವಾಗ ಇಲಾಖೆಯವರು ಅವನನ್ನು ಬೆನ್ನಟ್ಟಿದಾಗ ಆಸಾಮಿಗಳು ಕೈಗೆ ಸಿಗದೇ ಪರಾರಿಯಾಗಿರುತ್ತಾರೆ. ನಂತರ ವಾಹನವನ್ನು ಪರಿಶೀಲಿಸಿ ನೋಡಿದಾಗ ಕೆಂಪು ಬಣ್ಣದ ಬೈಕ್ ಮ್ಯಾಕ್ಸ್–ಆರ್–100 ಕೆಎ–27–ಇ–7378 ಮತ್ತು ಇಂಜಿನ್ ನಂ:1601-M-629144 ಛಾಸ್ಸಿಸ್ ನಂಬರ್: 160-F-585096 ಆಗಿದ್ದು, ನಂತರ ಈ ಬೈಕಿನ ಮೇಲಿಂದ ಗೋಣಿ ಚೀಲವನ್ನು ತೆರೆದು ಪರಿಶೀಲಿಸಿದಾಗ 3 ಬೀಟೆ ನಾಟಾ ಇದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಬೀಟೆ ನಾಟಾ ಅಳತೆ ಮಾಡಿದಾಗ 03=0.053 ಎಂ3 ಇದ್ದು, ಸದರಿ ನಾಟಾಗಳನ್ನು ಸಾಗಾಣಿಕೆ ಮಾಡಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165, 127(ಎ)ರ ಪ್ರಕಾರ ಅಂಬ್ಲಿಗೊಳ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:134/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ:26–03–2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಆರ್.ಸಿ. ಮಾಲೀಕರ ವಿರುದ್ದ ನ್ಯಾಯಾಲಯಕ್ಕೆ ದೋಷರೋಪಣಾ ಪಟ್ಟಿ ಸಲ್ಲಿಸಲು ಅನುಮತಿ ಕೋರಿ ಶಿಫಾರಸ್ಸು ಮಾಡಿರುತ್ತಾರೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:47/08–09 ದಿ: 01–07–2009ರಂದು ಪತ್ರ ಬರೆದು ಕೋರಲಾಗಿತ್ತು. ಈ ವಾಹನದ ಬಿ ವರದಿಯನ್ನು ಸಾರಿಗೆ ಅಧಿಕಾರಿ, ಹಾವೇರಿ ಇವರಿಗೆ ದಿ:13–07–2009 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಬಿ ವರದಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಶೇಕರಪ್ಪ ಬಿ. ಪುರದ್ ಬಿನ್ ಬಸವಣ್ಣಪ್ಪ, ನೂಲಗಿರಿ ವಾಸಿ, ಕಲಗುಂದ ಅಂಚೆ, ಹಿರೇಕೆರೂರು ತಾ॥ ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ದಿ:04–08–2009 ರಂದು 30 ದಿನಗಳ ಕಾಲಾವಕಾಶ ನೀಡಿ ನೊಂದಾಣಿ ಅಂಚೆ ಮೂಲಕ ನೋಟಿಸ್ ಜಾರಿ ಮಾಡಿದೆ. 30 ದಿನಗಳು ಕಳೆದರೂ ಸಹ ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ: ಬಿ3:ಅಮೊ:ವಾಹನ:ಸಿಆರ್–16/09–10/ದಿ:02–07–2009 ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:02–08–2009ರಂದು ಉದಯವಾಣಿ, ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:23–07–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:20–02–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ .ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಹಾಗೂ ಇಲ್ಲಿಯವರೆಗೆ ತಿದ್ದುಪಡಿಯಾದ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತು ಮಾಡಿದ ವಾಹನ ಕೆಂಪು ಬಣ್ಣದ ಬೈಕ್ ಮ್ಯಾಕ್ಸ್–ಆರ್–100 ಕೆಎ–27–ಇ–7378ನ್ನು ಮತ್ತು (ಇಂಜಿನ್ ನಂಬರ್:1601-M-629144 ಛಾಸ್ಸಿಸ್ ನಂಬರ್:160-F-585096) ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 03=0.053 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–03–2010ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.465

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ-46/08-09, ದಿನಾಂಕ:6ನೇ ಮಾರ್ಚ್, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಶಿಕಾರಿಪುರ ವಲಯ,
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** : ಯಾರು ಪತ್ತೆಯಾಗಿಲ್ಲ.

**ಭಾಧ್ಯತೆದಾರರು** : ಯಾರು ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:17-03-2009 ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಂಚಾರಿದಳ ಸಿಬ್ಬಂದಿಯೊಂದಿಗೆ ಶಿಕಾರಿಪುರ ತಾ॥ ಶಿಕಾರಿಪುರ ಟೌನ್‌ನ ಶಿಕಾರಿಪುರದಿಂದ ಶಿವಮೊಗ್ಗಕ್ಕೆ ಹೋಗುವ ರಸ್ತೆಯಲ್ಲಿ ಕಾಯುತ್ತಿರುವಾಗ ಗಾಮ ಕ್ರಾಸ್ ಕಡೆಯಿಂದ ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದರು ನಿಲ್ಲಿಸದೆ ವೇಗವಾಗಿ ಮುಂದೆ ಚಲಿಸಿದಾಗ ಅದನ್ನು ಬೆನ್ನಟ್ಟಿ ಹಿಡಿದಾಗ ಅದರಲ್ಲಿದ್ದ ಆಸಾಮಿ ವಾಹನದಿಂದ ಇಳಿದು ಕೈಗೆ ಸಿಗದೇ ಪರಾರಿಯಾಗಿದ್ದು, ನಂತರ ವಾಹನವನ್ನು ಪರಿಶೀಲಿಸಿ ನೋಡಿದಾಗ ಬಿಳಿ ಬಣ್ಣದ ಮಾರುತಿ ವ್ಯಾನ್ ಕೆಎ-03-ಎನ್-9107 ಮತ್ತು ಇಂಜಿನ್ ನಂಬರ್ ಕಂಡುಬಂದಿಲ್ಲ. ಛಾಸ್ಸಿಸ್ ನಂಬರ್: ST-91-IN-180326 ಆಗಿದ್ದು, ನಂತರ ವಾಹನದೊಳಗೆ ಪರಿಶೀಲಿಸಿದಾಗ ಸಾಗುವಾನಿ ಮತ್ತು ನಂದಿ ಸೈಜುಗಳಿದ್ದು, ಈ ಸೈಜುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಸಾಗುವಾನಿ ಮತ್ತು ನಂದಿ ನಾಟಾಗಳನ್ನು ಅಳತೆ ಮಾಡಿದಾಗ 61=0.389ಎಂ3 ಇದ್ದು, ಸದರಿ ನಾಟಾಗಳನ್ನು ಸಾಗಾಣಿಕೆ ಮಾಡಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 50(ಕೆ), 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಶಿಕಾರಿಪುರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:46/08-09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 21-03-2009 ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:46/08-09 ದಿ:21-03-2009 ರಂದು ಪತ್ರ ಬರೆದು ಕೋರಲಾಗಿತ್ತು. ಅದರಂತೆ ಸದರಿ ವಾಹನದ ಬಿ ವರದಿಯನ್ನು ಈ ನ್ಯಾಯಾಲಯಕ್ಕೆ ಸಾರಿಗೆ ಅಧಿಕಾರಿ ಸಾಗರ ಇವರ ಪತ್ರ ಸಂ.ಸಪ್ರಾಸಾಅ.ಸಾಗರ.ಆರ್‌ಜಿಎನ್./08-09 ದಿ:24-3-2009ರ ಪತ್ರದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ಬಿ ವರದಿಯಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ಶಿವರಾಜ್ ಬಿನ್ ಶಿವಪ್ಪ, ಈಸೂರು ಗ್ರಾಮ ಶಿಕಾರಿಪುರ ತಾ॥ ಇವರಿಗೆ ಈ ನ್ಯಾಯಾಲಯದಿಂದ ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ದಿ:25-04-2009 ರಂದು 30 ದಿನಗಳ ಕಾಲಾವಕಾಶ ನೀಡಿ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರ ಮುಖಾಂತರ ಜಾರಿ ಮಾಡಿದೆ. ನೋಟಿಸ್ ಜಾರಿ ಮಾಡಿ 30 ದಿನಗಳು ಕಳೆದರೂ ಸಹ ಆರ್.ಸಿ. ಮಾಲೀಕರು ಈ ನ್ಯಾಯಾಲಯಕ್ಕೆ ಕ್ಲೈಮ್ ಅರ್ಜಿ ಸಲ್ಲಿಸಿರುವುದಿಲ್ಲ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3: ಅಮೊ:ವಾಹನ: ಸಿಆರ್-16/09-10 ದಿ:02-07-2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ

ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:02–08–2009ರಂದು ಉದಯವಾಣಿ, ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:23–07–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:20–02–2010ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡುತ್ತಿರುವ ಸಮಯದಲ್ಲಿ ವಾಹನವನ್ನು ಅರಣ್ಯ ಉತ್ಪನ್ನ ಸಮೇತ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತುಮಾಡಿ, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ ಬಗ್ಗೆ ಸಾಬೀತಾಗಿದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ ಮತ್ತು ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಪ್ರಕಟಗೊಂಡು ಮತ್ತು ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಿ 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಮಹೇಶ್ ಬಿ. ಶಿರೂರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಹಾಗೂ ಇಲ್ಲಿಯವರೆಗೆ ತಿದ್ದುಪಡಿಯಾದ ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ, ಇವರು ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್ ಕೆಎ–03–ಎನ್–9107 ಮತ್ತು ಇಂಜಿನ್ ನಂಬರ್ ಕಂಡುಬಂದಿಲ್ಲ. ಛಾಸ್ಸಿಸ್ ನಂಬರ್: ST-91-IN-180326 ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ಮತ್ತು ನಂದಿ ಸೈಜ್ 61=0.389 ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿ:06–03–2010 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್.479

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ–48/08–09, ದಿನಾಂಕ:6ನೇ ಮಾರ್ಚ್, 2010**

**ಉಪಸ್ಥಿತರು** : ಶ್ರೀ ಮಹೇಶ್ ಬಿ. ಶಿರೂರ್ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಆನಂದಪುರಂ ವಲಯ, ಚೋರಡಿ
(ಮಾನ್ಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು** : 1) ರೋಹಿತ್ 2) ಪಿಲ್ಲಿಕುಮಾರ್ 3) ಶ್ರೀಕಾಂತ್ ಆಲಿಯಾಸ್ ಭಟ್ಟ

**ಭಾದ್ಯತೆದಾರರು** : ಯಾರೂ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿಲ್ಲ.

**ಪ್ರಸ್ತಾವನೆ:**

ದಿ:30–3–2009 ರಂದು ಆನಂದಪುರಂ ವಲಯದ, ಚೋರಡಿಯ ತುಪ್ಪೂರು ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿವಮೊಗ್ಗ ತಾಲ್ಲೂಕು ಕುಂಸಿ ಹೋಬಳಿ ಕೋಣೆಹೊಸೂರು ಗ್ರಾಮದ ಸ.ನಂ. 23ರ ಕರಡಿಬೆಟ್ಟ ಮೀಸಲು ಅರಣ್ಯದಲ್ಲಿ ಕಾಯುತ್ತಿರುವಾಗ ಒಂದು ಬಿಳಿ ಮಾರುತಿ ವ್ಯಾನ್ ಬರುತ್ತಿರುವುದನ್ನು ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ವಾಹನವು ಇಲಾಖಾ ಸಿಬ್ಬಂದಿಯವರು ನಿಂತ ಸ್ಥಳಕ್ಕೆ ಸುಮಾರು ಒಂದು ನೂರು ಅಡಿ ದೂರದಲ್ಲಿ ನಿಲ್ಲಿಸಿ, ಅದರಲ್ಲಿನ 3 ಜನ ಆಸಾಮಿಗಳಲ್ಲಿ 2 ಜನ ಆಸಾಮಿಗಳು ವಾಹನದಿಂದ ಇಳಿದು ಕಾಡಿನಲ್ಲಿ ಓಡಿ ಪರಾರಿಯಾಗಿದ್ದು, ಸಿಕ್ಕಿಬಿದ್ದ ವಾಹನ ಚಾಲಕನ ಹೆಸರು ರೋಹಿತ್ ಬಿನ್ ವೀರಭದ್ರಪ್ಪ, 19 ವರ್ಷ ಹೊಸೂರು ಗ್ರಾಮ ವಾಸಿ, ಆನಂದಪುರಂ ಹೋಬಳಿ, ಸಾಗರ ತಾ॥, ಓಡಿ ಹೋದವರ ಹೆಸರು (1)ಪಿಲ್ಲಿಕುಮಾರ್ ಬಿನ್ ಪಿಲ್ಲಿಚೌಡಪ್ಪ, ಅ.ವ. 27 ವರ್ಷ ಕೋಣೆಹೊಸೂರು ಗ್ರಾಮ, ಶಿವಮೊಗ್ಗ ತಾ॥. (2)ಶ್ರೀಕಾಂತ್ ಆಲಿಯಾಸ್ ಭಟ್ಟ ಬಿನ್ ಗಣಪ, ಅ.ವ. 19 ವರ್ಷ, ಕೋಣೆಹೊಸೂರು ಗ್ರಾಮ, ಶಿವಮೊಗ್ಗ ತಾ॥. ಎಂದು ಸಿಕ್ಕಿ ಬಿದ್ದ ಚಾಲಕನ್ನು ತಿಳಿಸಿರುತ್ತಾನೆ. ನಂತರ ವಾಹನ ಪರಿಶೀಲಿಸಿದಾಗ ಮಾರುತಿ ವ್ಯಾನ್ ನಂ:ಜಿಎ–01–ಎನ್–6869 ಇಂಜಿನ್ ನಂ: F-8-BIN-1172701, ಛಾಸ್ಸಿಸ್ ನಂಬರ್:ST-91-IN-117386 ಆಗಿದ್ದು, ಈ ವಾಹನದೊಳಗೆ ಸಾಗಿಸುತ್ತಿದ್ದ 5 ಬೀಟೆ ತುಂಡು 0.125ಎಂ3 ಪ್ರಮಾಣವಿದ್ದು, ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಮತ್ತು ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಆನಂದಪುರಂ ವಲಯ, ಚೋರಡಿಯ ಅರಣ್ಯ ಮೊಕದ್ದಮೆ ಸಂಖ್ಯೆ:130/08–09ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ದಿ: 31–03–2009ರಂದು ಆದೇಶವಾಗಿದೆ.

ಈ ಪ್ರಕರಣದ ವಿಚಾರಣಾ ವರದಿಯನ್ನು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿ, ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಮತ್ತು ಆರೋಪಿಗಳ ವಿರುದ್ದ ನ್ಯಾಯಾಲಯಕ್ಕೆ ಆರೋಪಣಾ ಪಟ್ಟಿ ಸಲ್ಲಿಸಲು ಅನುಮತಿ ಕೋರಿರುತ್ತಾರೆ.

**ಈ** ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು The director of transport commissioner Panaji, Goa ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:48/08–09 ದಿ: 2–06–2009ರಂದು ಪತ್ರ ಬರೆದು ಕೋರಲಾಗಿತ್ತು. ಈ ವಾಹನದ ಎನ್.ಓ.ಸಿ.ಯನ್ನು ಸಾರಿಗೆ ಅಧಿಕಾರಿ, ಸಾಗರ ಇವರಿಗೆ ದಿ:18–09–2008ರಲ್ಲಿ ಕಳುಹಿಸಿದ ಬಗ್ಗೆ ಸಾರಿಗೆ ಅಧಿಕಾರಿ, ಪಣಜಿ ಗೋವಾ ಇವರು ಪತ್ರ ಸಂಖ್ಯೆ: ಎಡಿಟಿ.(ಎನ್)ಎಂಎಪಿ.1327/2009 ದಿ: 17–06–2009ರ ಪತ್ರದಲ್ಲಿ ತಿಳಿಸಿರುತ್ತಾರೆ. ನಂತರ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಬಿ3:ಅಮೊ:ವಾಹನ–48/08–09 ದಿ:07–07–2009ರ ಪತ್ರದಲ್ಲಿ ಬಿ ಪ್ರತಿ ಒದಗಿಸಲು ಕೋರಲಾಯಿತು. ಅದರಂತೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಸಾರಿಗೆ ಅಧಿಕಾರಿ, ಸಾಗರ ಇವರನ್ನು ಸಂಪರ್ಕಿಸಿದ ಬಗ್ಗೆ ಮತ್ತು ಈ ವಾಹನದ ಸಿಸಿಯನ್ನು ಸಾರಿಗೆ ಕಛೇರಿ, ಸಾಗರಕ್ಕೆ ವರ್ಗಾಯಿಸಿಯಿಲ್ಲವೆಂದು ತಿಳಿಸಿರುತ್ತಾರೆಂದು ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರ ಪತ್ರ ಸಂ.ಅಮೊ.ವಾಹನ.ಜಿಎಲ್.443/09–10 ದಿ:17–09–2009ರ ಪತ್ರದಲ್ಲಿ ವರದಿಸಿ ದಿ:19–09–2009 ರಂದು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ:ಬಿ3: ಅಮೊ: ವಾಹನ: ಸಿಆರ್–16/09–10 ದಿ:02–07–2009ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿ:02–08–2009ರಂದು ಉದಯವಾಣಿ, ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿ:23–07–2009ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ಪ್ರಕರಣದಲ್ಲಿ ಮುಂದಿನ ಕ್ರಮ ಜರುಗಿಸಲಾಯಿತು.

